ಸುವಿಕಾಸ ಸಾಹಿತ್ಯ ಪ್ರಕಾಶನ ೧

# ಸರಸ-ವಿರಸ

## ( ಕಥಾ ಸಂಗ್ರಹ )




ಸುವಿಕಾಸ ಸಾಹಿತ್ಯ ಸಮಿತಿ
ಹುಬ್ಬಳ್ಳಿ

ಫೆಬ್ರುವರಿ ೧೯೫೦ )

( ಬೆಲೆ: ೧೨ ಆಣೆ

ಸಂಪಾದಕ :
ಹೊಬಳ್ಳಿ ಹೊಗಾರ

卐

ಪ್ರಕಾಶಕರು :
ಶ್ರೀ ಎಸ್. ಬಿ. ಪಾವಟೆ
(ಸುವಿಕಾಸ ಸಾಹಿತ್ಯ
ಸಮಿತಿಯ ಪರವಾಗಿ)

卐

ಮುದ್ರಕರು :
ಶ್ರೀ ಎಸ್. ವ್ಹಿ. ಶ್ರೇಷ್ಠಿ
ರಾಯಲ್ ಪ್ರಿಂಟಿಂಗ್ ಪ್ರೆಸ್
ಹುಬ್ಬಳ್ಳಿ

卐

# ಮುನ್ನುಡಿ

ಕನ್ನಡದ ಹೊಸ ಸಾಹಿತ್ಯ ಪ್ರಪಂಚದಲ್ಲಿ "ಸಣ್ಣ ಕಥೆ"ಯು ವಿಶಾಲವಾದ ಪ್ರದೇಶವನ್ನು ವ್ಯಾಪಿಸಿಕೊಳ್ಳುವದರಲ್ಲಿದೆ. ಒಂದು ಕಾಲದಲ್ಲಿ ತರುಣ ಲೇಖಕರ ಸಾಹಿತ್ಯ ನಿರ್ಮಿತಿ ಪದ್ಯ ಲೇಖನದಿಂದ ಪ್ರಾರಂಭವಾಗುತ್ತಿದ್ದಿತು. ಅದೀಗ ಸಣ್ಣ ಕಥೆಗಳ ಲೇಖನದಿಂದ ಪ್ರಾರಂಭವಾಗುತ್ತಲಿದೆ. ಸೌಲಭ್ಯ-ಸುಪರಿಣಾಮಗಳ ದೃಷ್ಟಿಯಿಂದ ಸಣ್ಣಕಥೆಯು ಬಹುಜನ ಲೇಖಕರನ್ನು ಮರುಳುಗೊಳಿಸಿಬಿಟ್ಟಿರುವದು. ನಮ್ಮ ಜನರ ಗುರಿಯು ಆಧ್ಯಾತ್ಮಿಕಸಿದ್ಧಿಯಿರುವಾಗ, ಅದನ್ನು ಸಾಧಿಸಲು ಹೆಣಗುತ್ತಿದ್ದ ಸಾಹಿತ್ಯ, ಶ್ರೀಮದ್ಗಾಂಭೀರ್ಯಪಥದಲ್ಲಿ ನಡೆಯಬೇಕಾಗಿದ್ದಿತು. ಆ ಗಾಂಭೀರ್ಯಕ್ಕೆ ತಕ್ಕ ವಾಹಕವೆಂದು ಪದ್ಯಶೈಲಿಯನ್ನೇ ಆರಿಸಿಕೊಳ್ಳಲಾಗುತ್ತಿದ್ದಿತು. ಇಂದಿನ ನಮ್ಮ ಬಹುಜನರ ಗುರಿಯು ಆದಿಭೌತಿಕ ಸಿದ್ಧಿಯಾಗಿರುವದರಿಂದ, ಇಂದಿನ ನಮ್ಮ ಸಾಹಿತ್ಯ ಬಹುಜನರನ್ನು ತನ್ನ ಕಡೆಗೆ ಸೆಳೆದುಕೊಳ್ಳುವಂತಹ ಲೀಲಾವಿಲಾಸಪಂಥವನ್ನು ಹಿಡಿದು ನಡೆದಿದೆ. ಈ ನಡಿಗೆಗೆ ಪದ್ಯಶೈಲಿಯ ಕೃತ್ರಿಮ ಬಂಧ-ಬಿಗುಹುಗಳು ಒಪ್ಪಿಗೆಯೆನಿಸವು. ಆದುದರಿಂದಲೇ ಅದು ಯಾವ ಬಂಧನವೂ ಇಲ್ಲದ ರೂಢ ಗದ್ಯಶೈಲಿಯನ್ನು ಹೊಂದಿಸಿಕೊಂಡಿದೆಯಷ್ಟೇ ಅಲ್ಲ; ಕನ್ನಡದ ವಿವಿಧ ದೇಶಿಗಳನ್ನೂ ಬಳಸಲಾಗುತ್ತಿದೆ. ರಾಜಕೀಯ ವಾದಗಳನ್ನೂ ಸಮಾಜ ಸುಧಾರಣೆಯ ರೀತಿ-ನೀತಿಗಳನ್ನೂ ಪ್ರಚಾರಮಾಡುವ ಪ್ರವೃತ್ತಿ ಇಂದು ನಮ್ಮ ನಾಡಿನ ವ್ಯಕ್ತಿ-ವ್ಯಕ್ತಿಗಳಲ್ಲಿಯೂ ಕಂಡುಬರುತ್ತಿರುವದು. ಇಂತಹ ಪ್ರಚಾರ ಕಾರ್ಯಕ್ಕಾಗಿ ಸಾಹಿತ್ಯದ ಮಿಕ್ಕರೂಪಗಳಿಗಿಂತ ಸಣ್ಣ ಕಥೆಯ ರೂಪದ ಪ್ರಯೋಜನ ಹೆಚ್ಚಾಗಿ ಆಗುತ್ತಲಿದೆ. ಆದುದರಿಂದಲೇ ಅದರ ಕ್ಷೇತ್ರ ವಿಸ್ತಾರವಾಗುತ್ತಲಿದೆ.

ರಸನಿರ್ಮಿತಿಯ ಗುರಿಯಿಂದ ಹೊರಟ ಕತೆಗಳು ವಸ್ತು, ಪಾತ್ರ, ಸನ್ನಿವೇಶ, ಶೈಲಿ ಇವೆಲ್ಲವುಗಳ ಔಚಿತ್ಯದಕಡೆಗೂ ಸೂಕ್ಷ್ಮ ಲಕ್ಷ್ಯವಿರಿಸಿ ನಿರ್ಮಿಸಿದುವಾಗಿರುತ್ತವೆ. ಪ್ರಚಾರೋದ್ದೇಶದಿಂದ ಹೊರಟ ಕತೆಗಳು

ಪರಿಣಾಮವೊಂದರ ಕಡೆಗೇ ಲಕ್ಷ್ಯವಿರಿಸಿ ಬೆಳೆಯಿಸಿದುವಾದುದರಿಂದ ಮಿಕ್ಕ ವಿಷಯಗಳ ಸ್ವಾಭಾವಿಕತೆ-ಅಸ್ವಾಭಾವಿಕತೆಗಳ ಕಡೆಗೆ ಅಷ್ಟೊಂದು ಲಕ್ಷ್ಯ ಪೂರಯಿಸಿರುವದಿಲ್ಲ. ಇದು ಮೊದಲಿನಿಂದಲೂ ನಡೆದುಬಂದ ಪದ್ಧತಿ. ನೀತಿಯನ್ನು ತಿಳುಹಲು ಹೊರಟ ಹಿಂದಿನ ಕತೆಗಳಲ್ಲಿ ಮನುಷ್ಯೇತರ ಪ್ರಾಣಿಗಳು ಮನುಷ್ಯರಂತೆ ವ್ಯವಹರಿಸಿರುವವು. ಇಂದಿನ ಪ್ರಚಾರ ಪ್ರಧಾನ ಕತೆಗಳಲ್ಲಿ ಮಾನವ ಪಾತ್ರಗಳು ಕತೆಗಾರನ ಉದ್ದೇಶದ ಕೈಗೊಂಬೆಗಳಾಗಿ ವ್ಯವಹರಿಸುತ್ತಿರುವವು. ಕತೆಗಾರನ ಹೆಸರು ಎಷ್ಟೇ ದೊಡ್ಡದಾಗಿ ಮೆರೆಯುತ್ತಿರಲಿ, ಪ್ರಚಾರ ಪ್ರಧಾನ ಕತೆಗಳಲ್ಲಿ ಭಾವಾಭಾಸ ಪಾತ್ರಾಭಾಸಗಳು ತಲೆದೋರದೆ ಹೋಗಲಾರವು.

ನಮ್ಮ ಕನ್ನಡಿಗರ ಇಂದಿನ ವೈಷಮ್ಯಮಯ ಜೀವನವು ಸಣ್ಣ ಕತೆಗೆ ಹಲವಾರು ಹೊಸ ಹೊಸ ವಸ್ತುಗಳನ್ನು ಒದಗಿಸಿಕೊಡುವಂತಿದೆ. ಆದರೂ ಪ್ರಾರಂಭ ಬರೆಹಗಾರರಲ್ಲಿ ಹೆಚ್ಚಿನ ಜನರು ತರುಣ-ತರುಣಿಯರ ಪ್ರೇಮ ಕಾಮಗಳಿಗೆ ಸಂಬಂಧಿಸಿದ ವಸ್ತುಗಳನ್ನೇ ಬಳಸುವರು. ಆದರೆ **ಪ್ರಸ್ತುತ ಸಂಕಲನದಲ್ಲಿಯ ಇಬ್ಬರು ತರುಣ ಲೇಖಕರೂ ತಮ್ಮ ಕತೆಗಳಿಗೆ ಸುತ್ತುಮುತ್ತಣ ಜೀವನದಿಂದಲೇ ವಸ್ತುಗಳನ್ನಾಯ್ದು ಕೊಂಡುದು ವಿಶೇಷ ಸಂಗತಿ.** ಮೊದಲನೆಯ ಕತೆಯನ್ನು ಬರೆದ ಶ್ರೀ|| ಜಿ. ಆರ್. ಬೆಲ್ಲದ ಅವರು, ಮುಸಿದ ನಾರಿ ಹೆಮ್ಮಾರಿಯಾಗಿ ಅಳಿಯನನ್ನೇ ಬಲಿಯಾಗಿ ತಗೆದುಕೊಂಡ ದುರಂತ ಚಿತ್ರವೊಂದನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಮಿಕ್ಕ ನಾಲ್ಕು ಕತೆಗಳು 'ಹೂಬಳ್ಳಿ ಹೂಗಾರ'ರವು. "ಹುಚ್ಚ ಹುಡುಗ''ದಲ್ಲಿಯ ದುಗ್ಯಾ ಇಂದಿನ ಸಾಮಾಜಿಕ ಕ್ರಾಂತಿಯ ವಿಷಯವನ್ನು ತಪ್ಪು ತಿಳಿವಳಿಕೆ ಮಾಡಿಕೊಂಡಿದ್ದ ಹುಚ್ಚು ಹುಡುಗರ ಪ್ರತಿನಿಧಿ. ವ್ಯಕ್ತಿಯ ಸ್ವಾನುಭವಸಿದ್ಧ ಆದರ್ಶಕ್ಕೂ ಸಮಾಜದ ಸಾಂಪ್ರದಾಯಿಕ ಆದರ್ಶಕ್ಕೂ ವಿರೋಧ ಬಂದಾಗ, ವ್ಯಕ್ತಿ ಹೇಗೆ ಸಮಾಜದ ತುಳಿತಕ್ಕೆ ಸಿಕ್ಕು ನುಗ್ಗಾಗುವನೆಂಬುದನ್ನು "ಹೇಡಿ-ಹೆಂಗಸು'' ಎಂಬ ಕತೆಯಲ್ಲಿಯ ಮೋಹನನ ಪಾತ್ರದ ಮುಖಾಂತರ ತೋರಿಸಲಾಗಿದೆ. ಭಾರತದಲ್ಲಿ ನಡೆದ ಹಿಂದು-ಮುಸ್ಲಿಮರ ಒಳಜಗಳ "ಅಲ್ಲಾ ಸಾಬ'' ಎಂಬ ದುರಂತ ಕಥೆಗೆ ಹಿನ್ನೆಲೆಯಾಗಿದೆ. ನಮ್ಮ ಜನತೆಯಲ್ಲಿಯ

ಅಜ್ಞಾನ, ದುರ್ವ್ಯಸನ, ಇವುಗಳ ಮೂಲಕ ಕೌಟುಂಬಿಕ ದಾರಿದ್ರ್ಯ—ಇವೆಲ್ಲವುಗಳ ದುಷ್ಪರಿಣಾಮ "ರಾಮು" ಎಂಬ ಕತೆಯಲ್ಲಿ ರೂಪಿತವಾಗಿದೆ.

ತರುಣ ಕತೆಗಾರರಿಬ್ಬರಿಗೂ ಮಾನವತೆಯ ಬಗೆಗೆ ಸಹಾನಭೂತಿಯೆಂಬುದು ಈ ಕತೆಗಳಿಂದ ಗೊತ್ತಾಗುವದಾದರೂ ಕತೆಗಳಲ್ಲಿ ಸಾಹಿತ್ಯದ ಪಾಕ ಹದಗೊಳ್ಳಲು ಇನ್ನೂ ಲೋಕಾನುಭವ ಹೆಚ್ಚಬೇಕೆಂಬ ಮಾತನ್ನು ಹಿರಿಯರಾದವರು ಹೇಳಬಹುದಾಗಿದೆ. ತಮ್ಮದಿದೊಂದು ಸಾಹಿತ್ಯ ಕ್ರೀಡೆಯೆಂಬ ವಿನಯದ ಕಲ್ಪನೆ ಈ ತರುಣ ಕತೆಗಾರರಿಗೆ ಇದೆಯಲ್ಲದೆ, ತಮ್ಮದೊಂದು ಕಲಾಪುಂಜವೆಂಬ ಮುಗ್ಧವಿಶ್ವಾಸವೇನೂ ಇಲ್ಲವೆಂಬುದನ್ನು ನಾನು ಅರಿತಿರುವೆ. ಇಂದಿನ ಈ ಕಿರಿಯರ ಕ್ರೀಡೆ, ಮುಂದೆ ಕನ್ನಡ ಶಾರದೆಯ ಕೊರಳಹಾರಕೆ ಒಪ್ಪುವಂತಹ ಮಣಿಗಳನ್ನು ಒದವಿಸುವ ಸಾಧನವಾಗಲಿ. ಈ ತರುಣ ಸಾಹಿತ್ಯ ಶಿಲ್ಪಿಗಳ ಹೆಸರು ಹಿರಿಯುವೆನಿಸಿಕೊಂಡು ಮೆರೆಯಲಿ.

"ಜಯಂತಿ ಕಾರ್ಯಾಲಯ"
ಧಾರವಾಡ
ತಾ|| ೮-೧೨-೧೯೪೯

**ಬೆಟಗೇರಿ ಕೃಷ್ಣಶರ್ಮ**

# VI

## ಸಂಪಾದಕರ ಮಾತು

ಐದು ಚಿಕ್ಕ ಕತೆಗಳ ಸಂಗ್ರಹವಾದ “ಸರಸ-ವಿರಸ” ಎಂಬ ಈ ಚಿಕ್ಕ ಹೊತ್ತಿಗೆಯನ್ನು ಸಹೃದಯರಾದ ಓದುಗರ ಮುಂದೆ ಇಡಲು ನಮಗೆ ತುಂಬಾ ಹೆಮ್ಮೆ ಎನಿಸುತ್ತದೆ. ಈ ಸಂಗ್ರಹದಲ್ಲಿ ಬಂದ ಎಲ್ಲ ಕತೆಗಳೂ ಉತ್ತಮ ಕಲಾಕೃತಿಗಳೆಂಬ ಒಣ ಅಭಿಮಾನವು ಈ ಹೆಮ್ಮೆಗೆ ಕಾರಣವಲ್ಲ. ಆದರೆ ಕನ್ನಡ ತಾಯಿಯ ಸೇವೆಯನ್ನು ತ್ರಿಕರಣ ಪೂರ್ವಕವಾಗಿ ಮಾಡಬೇಕೆಂಬ ಮಹದಾಶೆಯನ್ನಿಟ್ಟುಕೊಂಡ ನಾವು ಮಾತಿನ ಯುಗವನ್ನು ದಾಟಿ ಕಾರ್ಯರಂಗಕ್ಕೆ ಇಳಿಯುವ ಸಾಹಸ ಮಾಡಿದ್ದೇವೆಂಬುದೇ ನಮ್ಮ ಹೆಮ್ಮೆಗೆ ಕಾರಣ.

ಕನ್ನಡನಾಡಿನಲ್ಲಿಂದು ಸಾಹಿತ್ಯವು ವಿಪುಲವಾಗಿ ಬೆಳೆದು ಬರುತ್ತಲಿದೆ. ವಿಧವಿಧವಾದ ಸಾಹಿತ್ಯವನ್ನಿಂದು ಕನ್ನಡ ಸಾಹಿತ್ಯೋಪಾಸಕನು ದೊರಕಿಸಿಕೊಳ್ಳಬಲ್ಲನು. ಆದರೆ ಸಾಹಿತ್ಯವೆಂದರೇನು? ಸಾಹಿತ್ಯವು ಹೇಗಿರಬೇಕು? ಮೊದಲಾದ ಪ್ರಶ್ನೆಗಳಿಗೆ ಎಲ್ಲರೂ ಒಂದೇ ವಿಧವಾದ ಉತ್ತರಗಳನ್ನು ಕೊಡಲಾರರೆಂದು ನಮ್ಮ ಗ್ರಹಿಕೆ. ಯಾಕೆಂದರೆ “ಸಾಹಿತ್ಯ” ಎಂಬ ಶಬ್ದವೇ ಬಹು ವ್ಯಾಪಕಾರ್ಥವುಳ್ಳದ್ದು. ಕೆಲವರು ಸಾಹಿತ್ಯ ಕೃತಿಗಳಿಂದ ಮನರಂಜನೆಯನ್ನು ಬಯಸಿದರೆ, ಮತ್ತೆ ಕೆಲವರು ನೀತಿಬೋಧೆಯನ್ನು ಬಯಸುತ್ತಾರೆ. ಕೆಲವರು ಸಾಹಿತ್ಯದಿಂದ, ತಮ್ಮ ಜಗದ ಜಂಜಾಟಗಳನ್ನು ಮರೆತು ಸಮಾಧಾನ ಹೊಂದಲು ಬಯಸಿದರೆ, ಮತ್ತೆ ಕೆಲವರು ಈ ಜಗತ್ತನ್ನೇ ಬಿಟ್ಟು ಕನಸಿನ ಲೋಕದಲ್ಲಿ ವಿಹರಿಸ ಬಯಸುತ್ತಾರೆ. ಆದರೆ ಮೇಲಿನ ಯಾವದೆ ಒಂದನ್ನೇ ಸಾಧಿಸುವ ಉದ್ದೇಶವನ್ನಿಟ್ಟುಕೊಂಡು ತಯಾರಿಸಿದ ಸಾಹಿತ್ಯವು ಉತ್ತಮ ಸಾಹಿತ್ಯ ಕೃತಿಯಾಗಲಾರದೆಂದು ನಮ್ಮ ನಂಬಿಕೆ. ಸಾಹಿತ್ಯವೆಂದರೇ ಜೀವನ. ಜೀವನವು ದುಃಖದುಮ್ಮಾನ, ದ್ವೇಷ, ಅಸೂಯೆ ಆಶೆಗಳಿಗೆ ಆಗರವಾಗಿರುವಂತೆ ಸುಖ, ಸಂತೋಷ, ಪ್ರೇಮ, ಆನಂದಗಳಿಗೂ ಎಡೆಯುಳ್ಳದ್ದಾಗಿದೆ. ಇವನ್ನೇ ಶಬ್ದಗಳಿಂದ ಚಿತ್ರಿಸಿ, ನಾವು ನಿಜಜೀವನಕ್ಕೆ ಮತ್ತಷ್ಟು ಸಮೀಪವರ್ತಿಗಳಾಗುವಂತೆ ಮಾಡುವದೇ ಸಾಹಿತ್ಯದ ಮೊದಲನೆಯ ಕೆಲಸ.

ಈ ಉದ್ದೇಶವನ್ನು ನಮ್ಮೆದುರಿಗೆ ಇಟ್ಟುಕೊಂಡೇ ನಾವು ಈ ಸಂಗ್ರಹವನ್ನು ತಯಾರಿಸಿದ್ದೇವೆ. ಇದರಲ್ಲಿ ನಾವು ಸಾಕಷ್ಟು ಸಫಲರಾಗಿಲ್ಲವೆಂದು ವಿಮರ್ಶಕರು ಹೇಳಬಹುದು. ಆದರೂ ಆ ದಿಶೆಯಲ್ಲಿ ನಾವು ಪ್ರಯತ್ನ ಪಟ್ಟಿರುವದೇ ನಮ್ಮ ಹೆಮ್ಮೆ.

ಇನ್ನು ಈ ಸಂಗ್ರಹವು ಓದುಗರ ಕೈ ಸೇರುವಂತೆ ಮಾಡುವದಕ್ಕೆ ನಮ್ಮ ಮಿತ್ರರ, ಹಿತೈಷಿಗಳ ಹಾಗೂ ಹಿರಿಯರ ನೆರವು ಇಲ್ಲದಿದ್ದರೆ ನಮ್ಮ ಆಶೆ ಆಶೆಯಾಗಿಯೇ ಉಳಿಯುತ್ತಿತ್ತೇನೋ? ಆದರೆ ನಮಗೆ ಅನೇಕರು ಅನೇಕ ಬಗೆಯಿಂದ ನೆರವಾಗಿ ಪ್ರೋತ್ಸಾಹನ ವನ್ನಿತ್ತಿದ್ದಾರೆ. ಮುನ್ನುಡಿಯನ್ನು ಬರೆದುಕೊಟ್ಟು ಆಶೀರ್ವದಿಸಿದ ಹಿರಿಯ ಸಾಹಿತಿಗಳಾದ ಶ್ರೀ ಬೆಟಗೇರಿ ಕೃಷ್ಣಶರ್ಮರಿಗೂ, ಹಾಗೂ ಅಭಿಪ್ರಾಯಗಳನ್ನು ಬರೆದು ಕೊಟ್ಟು ಪ್ರೋತ್ಸಾಹಿಸಿದ ಶ್ರೀ ಸಿಂಪಿ ಲಿಂಗಣ್ಣ, ಶ್ರೀ ಹೀರೆಮಲ್ಲೂರ ಈಶ್ವರನ್‌ರವರಿಗೆ, ನಾವೆಷ್ಟು ಕೃತಜ್ಞತೆಗಳನ್ನರ್ಪಿಸಿದರೂ ಅಲ್ಪವೇ. ಮುಖಚಿತ್ರವನ್ನು ಒಳ್ಳೇ ಸುಂದರವಾಗಿ ಬಿಡಿಸಿಕೊಟ್ಟ ಕಲಾಕಾರ ಶ್ರೀ ಕೃಷ್ಣಾ ಕ್ಷತ್ರಿಯವರನ್ನೂ ಹಾಗು ಹಸ್ತಪ್ರತಿಗಳನ್ನು ಓದಿಕೊಟ್ಟ ಶ್ರೀ ಹರಿದಾಸರವರನ್ನೂ ನಾವು ಇಲ್ಲಿ ನೆನೆಸಲಿಕ್ಕೇಬೇಕು.

ಈ ಸಂಗ್ರಹದಲ್ಲಿ ಬಂದ "ಹುಚ್ಚ ಹುಡುಗ" ಎಂಬ ಕತೆಯು, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ "ಕನ್ನಡ ನುಡಿ"ಯಲ್ಲಿಯೂ ಮತ್ತು "ಅಲ್ಲಾ ಸಾಬ" ಎಂಬ ಕಥೆಯು "ಕಥಾವಳಿ" ಯಲ್ಲಿಯೂ ಈ ಮೊದಲೇ ಪ್ರಕಟವಾಗಿವೆ. ಉಳಿದುವುಗಳು ಇದೇ ಮೊದಲನೆಯ ಸಲ ಪ್ರಕಟವಾಗುತ್ತಲಿವೆ.

ಮುದ್ರಣ ಕಾರ್ಯವು ಸ್ವಲ್ಪ ಅವಸರವಾಗಿ ಸಾಗಿದ್ದುದರಿಂದ ಕೆಲವೊಂದು ಮುದ್ರಣ ದೋಷಗಳು ಹಾಗೆಯೇ ಉಳಿದಿದ್ದುದಕ್ಕಾಗಿ ಓದುಗರ ಕ್ಷಮೆ ಕೋರುತ್ತೇವೆ.

ಸುವಿಕಾಸ ಸಾಹಿತ್ಯ ಸಮಿತಿ
ಹುಬ್ಬಳ್ಳಿ
೧೫—೨—೧೯೫೦

—ಪೂಬಳ್ಳಿ ಹೂಗಾರ

# ಪರಿವಿಡಿ

ಮೊದಲನೆಯ ಎಸಳು

# ಸರಸ-ವಿರಸ

ಪ್ರಶಾಂತದಿಗಂತದಲ್ಲಿ ಕ್ಷಿತಿಜದೆಸೆಗೆ ಉತ್ತುಂಗಬೆಟ್ಟಗಳ ಶಿಖರಗಳು ಬಾಂದಳವನ್ನು ಅಪ್ಪಿ ಚುಂಬಿಸಿ ಒಪ್ಪುತ್ತಿರಲು; ಮೂಡಣದಿಕ್ಕಿನ ವನಿತೆಯ ಕಪೋಲಗಳು ಕೆಂಪೇರಿದವು. ಶಿಖರಗಳ ಹಿಂಬದಿಯಿಂದ ಹೊನ್ನಿನ ಸೊನ್ನೆ ಸೂಸಿ ಪ್ರಕೃತಿ ತರುಣಿಗೆ ತರುಣನು ಬಗೆ ಬಗೆಯ ಪೀತಾಂಬರವನ್ನು ತೊಡಿಸಿದನು. ತಂಗಾಳಿ ತೀಡಿ ತೀಡಿ ನೊಯ್ಯನೊಯ್ಯನೆ ಶಂಕರನು ಮಲಗಿದ ಕೋಣೆಯನ್ನು ಪ್ರವೇಶಿಸಿತು. ಹೊತ್ತಾದರೂ ಇನ್ನೂ ಏಳದಿದ್ದುದನ್ನು ಕಂಡು ಶಂಕರನ ತಾಯಿ—ಶಾಂತಮ್ಮ, ಆತನನ್ನೆಬ್ಬಿಸಲೆಂದು ಅವನ ಕೋಣೆಯನ್ನು ಪ್ರವೇಶಿಸಿದಳು. ಶಂಕರನಿಗೆ ಎಚ್ಚರವಾಗಿದ್ದರೂ ಹಾಸಿಗೆಬಿಟ್ಟು

ಮೇಲಕ್ಕೇಳಲು ಒಪ್ಪಲಾರದ ಮನಸ್ಸಿನಿಂದ ಸೊಳ್ಳೆಯ ಪರದೆಯನ್ನೆತ್ತಿ ಕಂಬಳಿ ಹೊದ್ದು ಕೊಂಡು ಹೊರಳಾಡುತ್ತಾ ಮಲಗಿ ಕೊಂಡಿದ್ದನು.

“ಮೂರುತಾಸು ಹೊತ್ತೇರೇತಿ ಇನ್ನೂ ಏಳೂದಿಲ್ಲ?” ಎಂದು ಕೇಳಿದಳು ಶಾಂತವ್ವ ಪ್ರೇಮ ಪೂರಿತ ಕೋಪದಿಂದ.

ನಿರ್ವಾಹವಿಲ್ಲದೇ ಶಂಕರನು ಮೈಮುರಿದೆದ್ದು ಮುಖವನ್ನು ತೊಳೆದು ಕೊಂಡು ಟೇಬಲ್ಲಿನ ಎದುರಿನಲ್ಲಿದ್ದ ಆಸನದಲ್ಲಿ ಕುಳಿತುಕೊಂಡನು. ದಿನಮಣಿಯ ಅಂದವಾದ ನೋಟ ಚಂದೋದಧಿಯಲ್ಲಿ ಮಿಂಚುತಿತ್ತು. ಪಕ್ಷಿಗಳೆಲ್ಲಾ ತಮ್ಮ ಇಂಪಿನ ಉದಯರಾಗದ ಪ್ರಥಮ ಪಲ್ಲವಿಯನ್ನು ಹಾಡಿ ಮುಗಿಸಿದ್ದವು. ಬಳಿಯಲ್ಲಿದ್ದ ಕಿಡಕಿಯಿಂದ ತಂಗಾಳಿಯು ಬೀಸುತ್ತಿದ್ದುದರಿಂದ, ಕೆಂದಾವರೆಯ ಮುಖಕ್ಕೆ ಕಳೆಗೊಟ್ಟಿದ್ದವು. ನಿಲುವಿಕೆಗೆ ತಕ್ಕ ಮೈಕಟ್ಟು, ಮನಸ್ಸುಖ, ಪ್ರಸನ್ನಚಿತ್ತ ಸಾರಿ ಹೇಳುತಿದ್ದವು.

ಓದಬೇಕೆಂದು ಪುಸ್ತಕ ಹಿಡಿಯುವಷ್ಟರಲ್ಲಿ “ಪ್ರಗತಿ” ಪತ್ರಿಕೆ ಬಂತು. ಕಣ್ಣಿನಿಂದ ಪತ್ರಿಕೆ ಓದುತ್ತ ಚಹ ಗುಟುಕರಿಸುತಿದ್ದ. ಅಷ್ಟರಲ್ಲಿಯೇ ಪೋಸ್ಟಮನ್ನನು ಬಂದು ಒಂದು ಪತ್ರವನ್ನು ಒಗೆದು ಹೋದದ್ದರಿಂದ ಪತ್ರಿಕೆ ಓದುವದು ಅಷ್ಟಕ್ಕೇ ಕೊನೆಗೊಂಡಿತು.

ಶಂಕರನು ಪತ್ರವನ್ನು ತೆಗೆದುಕೊಂಡು ಓದಿದನು. ಪತ್ರ ಓದುತ್ತಿದ್ದಂತೆ ಆತನ ಮುಖದಲ್ಲಿ ಬದಲಾಗುತ್ತಿದ್ದ ಭಾವನೆಗಳನ್ನೇ ನಿರೀಕ್ಷಿಸುತ್ತ ನಿಂತುಕೊಂಡಿದ್ದ ಶಾಂತವ್ವ ಕೇಳಿದಳು—“ಯಾರದು ಪತ್ರ?”

“ಬಾಗಿಲುಕೋಟೆಯಿಂದ ಬಂದೈತಿ.”

ಬಾಗಿಲುಕೋಟೆ ಎನ್ನುತ್ತಲೇ ಎಲ್ಲರಿಗೂ ಗೊತ್ತಾಯಿತು- ಯಾರು ಪತ್ರ ಬರೆದಿರುವರೆಂಬುದು. ಶಂಕರನ ಹೆಂಡತಿಯ ಊರು ಬಾಗಿಲುಕೋಟೆ. ಕಾರಹುಣ್ಣಿವೆಗೆ ಬಾಗಿಲುಕೋಟೆಗೆ ಬರಬೇಕಂತೆ. ಎಲ್ಲರೂ ಇವನ ದಾರಿಯನ್ನೇ ಕಾಯುತ್ತಿರುವರಂತೆ.

ಅದೇ ಸಾರೆ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು ಹೊಸದಾಗಿ ಕೊಂಡುಕೊಂಡಿದ್ದ ಎತ್ತುಗಳ ಮೈತಿಕ್ಕುತ್ತ ನಿಂತುಕೊಂಡಿದ್ದ ಶಂಕರನ ಮಾವ ಒಮ್ಮೆಲೇ ಮಾತಿಗೆ ಮೊದಲು ಮಾಡಿದ.

“ನಮ್ಮ ಊರಾಗ ಏನ ಕಾರಹುಣ್ಣಿವಿ ಇಲ್ಲೇನು? ಹೊಸಾ ಎತ್ತು

ನಿಮಿತ್ತ ಬಿಡುವು ಇದ್ದುದರಿಂದ ಮತ್ತು ತಾಯಿಯು ಮನೆಗೆ ಬರಲೇ ಬೇಕು ಎಂದು ಒತ್ತಾಯ ಪಡಿಸಿದ್ದರಿಂದ ನಿರ್ವಾಹವಿಲ್ಲದೇ ಮನೆಗೆ ಬಂದಿದ್ದನು. ಆದರೆ ಹತ್ತು ಹನ್ನೆರಡು ದಿನಗಳನ್ನೂ ಈ ಹಳ್ಳಿಯಲ್ಲಿಯೇ ಕಳೆಯಲಿಕ್ಕೆ ಅವನ ಮನಸ್ಸು ಒಪ್ಪಲಿಲ್ಲ. ಹೆಂಡತಿಯ ಊರು-ಬಾಗಿಲುಕೋಟೆಗಾದರೂ ಹೋಗಿ ಬರಬೇಕೆಂದು ಮನಸ್ಸು ಮಾಡಿದ್ದನು. ಅನಾಯಾಸವಾಗಿ ಎಲ್ಲ ಪ್ರಸಂಗಗಳೂ ತಮ್ಮಿಂದ ತಾವೇ ಒದಗಿ ಬಂದವು.

ಆಯಿತು. ಶಂಕರ ಮಾವನ ಊರಿಗೆ ಹೊರಡಲು ಅನುವಾದನು.

"ಊಟಾ ಅಲ್ಲೆ-ಇಲ್ಲೆ ಮಾಡಬೇಡಾ" ಎಂದು ತಾಯಿ ನುಡಿದಳು. ಶಂಕರನು ಇತ್ತ ಲಕ್ಷಕೊಡಲು ಉಟ್ಟ ಧೋತರ ಕಾಲಲ್ಲಿ ಸಿಕ್ಕು ಎಡವಿದನು.

"ಸ್ವಲ್ಪ ಕುಳಿತುಕೋ. ನೀರನ್ನಾದರೂ ಕುಡಿ" ಎಂದು ಎಡವಿದ್ದರಿಂದ ಸಂಶಯವನ್ನು ತಂದು ಕೊಂಡ ಶಂಕರನ ತಾಯಿ ನುಡಿದಳು.

"ನೀರಗೀರ ಕುಡಕೊಂತ ಇಲ್ಲೇ ಕುಳಿತು ಬಿಟ್ಟರೆ ಹೊತ್ತಾಗುತ್ತದೆ. ಎಂದು ತಾಯಿಯ ಮಾತನ್ನು ಅಲಕ್ಷಿಸುತ್ತ ಸ್ಟೇಶನ್ನಿಗೆ ಬಂದು ತಿಕೀಟು ತೆಗೆದು ಗಾಡಿಯಲ್ಲಿ ಕುಳಿತನು.

ಗಾಡಿಯು ಸಿಲ್ದಾಣವನ್ನು ಬಿಟ್ಟು ಒಳ್ಳೇ ರಭಸದಿಂದ ಓಡ ಹತ್ತಿತು. ಉಗಿಬಂಡಿಗಿಂತ ಇವನ ಮನೋಬಂಡಿಯು ಕ್ಷಣಕ್ಕೆ ಸಾವಿರಾರುಸಾರೆ ಮಾವನ ಊರನ್ನು ಮುಟ್ಟಿಸಿ ತಿರುಗಿ ಅವನನ್ನು ವಾಸ್ತವ ವೇಗಕ್ಕೆ ತಂದು ಮುಟ್ಟಿಸುತ್ತಿತ್ತು. ಹೀಗೆ ಮನೋವೇಗಕ್ಕೆ ತಕ್ಕ ವೇಗದಿಂದ ಗಾಡಿಯುಹೋಗಲೊಲ್ಲದು-ಎಂಬುದನ್ನು ಕಂಡುಕೊಂಡ ಶಂಕರನಿಗೆ ಗಾಡಿಯಲ್ಲಿ ಕುಳಿತು ಕೊಳ್ಳುವುದು ಅತಿ ಬೇಸರವೆನಿಸಿತು. ಹೇಗಾದರೂ ಬೇಸರ ಕಳೆದು ಕೊಳ್ಳಬೇಕೆಂದು ಅಂದಿನ ಪತ್ರಿಕೆಯನ್ನು ಕಣ್ಣ ಮುಂದೆ ಹಿಡಿದುಕೊಂಡನು. ಆದರೆ ಅವನು ಪತ್ರಿಕೆಯಲ್ಲಿ ಕಂಡದ್ದೇನು? ಅಕ್ಷರಗಳಲ್ಲ. ಸರೋಜಳ ಚಿತ್ರ. ಸರೋಜಳ ಮಧ್ಯಮ ನಿಲುವಿಕೆ, ಹರವಾದ ಉಬ್ಬಿದೆದೆ. ಕಮಲದಂತಹ ಮುಖ, ಅದರಲ್ಲಿಯೇ ಅರಳಿದ ಮಲ್ಲಿಗೆಯಂತಿದ್ದ ಕಣ್ಣುಗಳಿಂದ ಹೊರಸೂಸುವ ಒಲವಿನ ನೋಟ ಅವನ ಹೃದಯವನ್ನು ಸೆರೆಹಿಡಿದಿದ್ದವು. ತನ್ನ ಮನಸ್ಸಿನಲ್ಲಿಯ ಆಕೆಯ ಚಿತ್ರವನ್ನು ತನ್ನೆದುರು ಹಿಡಿದು-ಕೊಂಡು ಕುಳಿತಿರುವ **ಪತ್ರಿಕೆಯಲ್ಲಿ ಕಾಣುತ್ತ** ತಾನು ಜ್ಞಾನದ ಖಣಿ, ಅವಳು ಸೊಬಗಿನ

ಮಣಿ, ಶ್ರೀಯು ತನ್ನ ಮನೆತನಕ್ಕೆ ಭೂಷಣವಾಗಿದ್ದುದನ್ನು ನೆನೆನೆನೆದು ತನ್ನ ಭಾವೀ ಜೀವನಕ್ಕೆ ಬಗೆ ಬಗೆಯ ಬಣ್ಣವನ್ನೆಳೆಯುತ್ತ, ಕವಿಯ ಕಲ್ಪನೆಗೂ ಕೂಡಾ ಎಟುಕದ ಸುಖದ ಸಂಸಾರವನ್ನು ಕಟ್ಟಿ, ಚಿತ್ರಕಾರನಿಗೂ ಕೂಡಾ ಚಿತ್ರಿಸಲು ಬಾರದ ಜೀವನವನ್ನು ಚಿತ್ರಿಸುತ್ತ, ಭಾವನಾತರಂಗದಲ್ಲಿ ತೇಲಾಡುವ ಜೀವಿತನಾಗಿದ್ದು ಆನಂದವನ್ನು ಹೊಂದುತ್ತಿದ್ದನು. ಅವನ ಮಗ್ಗುಲಲ್ಲಿಯೇ ಕುಳಿತ ಒಬ್ಬರು "ಸ್ವಲ್ಪ ಪೇಪರಕೊಡ್ರಿ—ಓದಿಕೊಡತೇನಿ" ಅಂದರು.

ಮನಸ್ಸಿಲ್ಲದ ಮನಸ್ಸಿನಿಂದ ನಿರಾಕರಿಸಲ್ಲದೆ ಅವನಿಗೆ ಪತ್ರಿಕೆಯನ್ನು ಓದಲುಕೊಟ್ಟನು.

"ನಾನು ಈ ವರೆಗೂ ಪತ್ರಿಕೆಯಲ್ಲಿ ಕಂಡ ಚಿತ್ರವು ಅವರಿಗೂ ಕಾಣುವುದೇ?" ವಿಚಾರ ಬಂದಿತು ಶಂಕರನಿಗೆ. ಅದರೊಂದಿಗೆ ಒಂದು ಮುಗುಳು ನಗೆಯೂ ಹೊರಸೂಸಿತು. ಅವರಿಗೆ ಅದರಲ್ಲಿ ಕಾಣುವದು "ಸಕ್ಕರೆಗಾಗಿ ಮುಂಬೈಯಲ್ಲಿ ಗದ್ದಲ, ಕಲಕತ್ತೆಯಲ್ಲಿ ಗೋಳಿಬಾರು" ಮೊದಲಾದ ನೀರಸವಾದ ಸುದ್ದಿಗಳು ಮಾತ್ರ. ಸರೋಜಳ ಮುಖ ಆ ಪತ್ರಿಕೆಯಲ್ಲಿ ಕಾಣಬೇಕಾದರೆ ಅದಕ್ಕೆ ತನ್ನ ಕಣ್ಣುಗಳೇ ಬೇಕು" ಎಂದು ಅಂದುಕೊಂಡು ತನ್ನಷ್ಟಕ್ಕೆ ತಾನೇ ಸಮಾಧಾನ ಪಡಿಸಿಕೊಂಡನು.

ಶಂಕರನ ಮಗ್ಗುಲಲ್ಲಿಯೇ ಕುಳಿತ ಆ ಮಹನೀಯರು ಪತ್ರಿಕೆಯಲ್ಲಿನ ಸುದ್ದಿಯನ್ನು ಒದರಿ ಒದರಿ ಓದುತ್ತ ಅವುಗಳಬಗ್ಗೆ ತಮ್ಮ ಎದುರಿನವರಕೂಡ ಚರ್ಚೆ ಮಾಡುತಿದ್ದು ತಮ್ಮ ಟೀಕೆಗಳನ್ನು ವ್ಯಕ್ತಪಡಿಸಹತ್ತಿದರು. ಇನ್ನು ಈ ಮಹನೀಯರು ತನ್ನ ಕೂಡ ಸಹ ವಾದವಿವಾದ ಶುರುಮಾಡಬಹುದೆಂದು ಹೆದರಿದ ಶಂಕರ ಕಿಡಿಕೆಯ ಹೊರಗೆ ಮುಖಹಾಕಿ; ಅತಿ ವೇಗದಿಂದ ಹಿಂದಕ್ಕೆ ಓಡುತ್ತಿದ್ದ ಗಿಡಗಂಟಿ, ತಾರಿನ ಕಂಬಗಳನ್ನು ನೋಡುತ್ತ ಕುಳಿತುಕೊಂಡನು. ಇಳೆಯಲ್ಲವೂ ಬೆಳೆಯಿಂದ ಕೂಡಿ ಗಾಳಿಯೊಂದಿಗೆ ಕುಣಿಯುತ್ತಿತ್ತು. ತಂಗಾಳಿಯು ರವಿಯ ರಶ್ಮಿಯೊಂದಿಗೆ ಕಾದಾಡಿ ಆಶ್ರಯಕ್ಕಾಗಿ ಗಾಡಿಯಲ್ಲಿ ಓಡಿ ಬರುತ್ತಲಿತ್ತು. ಗಾಡಿಮಾತ್ರ ನಿಸರ್ಗದ ಈ ಸೌಂದರ್ಯಕ್ಕೆ ಮರುಳಾಗದೇ ಸದ್ದು ಮಾಡುತ್ತ ವೇಗದಿಂದ ಸಾಗಿತ್ತು.

ಶಂಕರನ ಹೆಂಡತಿಯ ಮನೆಯವರೂ ತಕ್ಕ ಮಟ್ಟಿಗೆ ಶ್ರೀಮಂತರೇ ಇದ್ದರು. ಆದರೂ ಜಿಪುಣರೆಂದು ಊರಿಗೇ ಪ್ರಸಿದ್ಧರಾಗಿದ್ದರು. ಶಂಕರನ ಅತ್ತೆ ರುದ್ರಮ್ಮನಂತೂ ನಿಜವಾಗಿಯೂ ರುದ್ರಮ್ಮನೇ. ತನ್ನ ಗಂಡನಿಗಿಂತಲೂ ಜಿಪುಣತನದಲ್ಲಿ ಒಂದಲ್ಲ ಎರಡು ಹೆಜ್ಜೆ ಮುಂದೆ. ಮೇಲಾಗಿ ದುರಾಶೆ. ಅಸೂಯೆಗಳಂತೂ ಅವಳ ಹುಟ್ಟು ಗುಣಗಳಾಗಿದ್ದವು. ಎಲ್ಲವೂ ತನಗೇ ಆಗಬೇಕು, ಊರಲ್ಲಿ ತಾನೊಬ್ಬಳೇ ಸಿರಿವಂತಿಕೆಯಿಂದ ಮೆರೆಯಬೇಕು; ಪರರು ಏನು ಮಾಡಿದರೂ ಆಕೆಗೆ ಸೇರದು. ಆದ್ದರಿಂದಲೇ ಶಂಕರನ ಸಿರಿವಂತಿಕೆ ಅವಳ ಕಣ್ಣಲ್ಲಿ ಮುಳ್ಳಾಡಿದಂತೆ ಆಡುತ್ತಿತ್ತು. ತನ್ನ ಇದ್ದೊಬ್ಬ ಮಗಳು–ಸರೋಜಳನ್ನು ತನ್ನ ತಮ್ಮ ಶೇಖರನಿಗೆ ಕೊಟ್ಟು ಮದುವೆ ಮಾಡಬೇಕೆಂಬುದು ಆಕೆಯ ಹೆಬ್ಬಯಕೆಯಾಗಿತ್ತು. ಆದರೆ ಸರೋಜಳ ತಂದೆಯು ಮಾತ್ರ ಇವಳ ಕಡೆಗೆ ಲಕ್ಷ್ಯ ಕೊಡದೆ ಸಿರಿವಂತನೂ ಜಾಣನೂ ಅದೇ ವೇಳೆಗೆ ಸುಂದರನೂ ಆದ ಶಂಕರನಿಗೆ ಸರೋಜಳನ್ನು ಕೊಟ್ಟು ಮದುವೆ ಮಾಡಿದ್ದರು. ಇದರಿಂದ ರುದ್ರಮ್ಮನಿಗೆ ಬಹಳ ಕೋಪ ಬಂದಿತು. ಅವಳ ಅಜ್ಞಾನವು ತನ್ನ ಎಲ್ಲ ಬಯಕೆಗಳಿಗೆ ಶಂಕರನೇ ಕಲ್ಲು ಹಾಕಿದವ ಎಂದು ತಿಳಿದುಕೊಂಡು ಅವನಮೇಲೆ ಕಿಡಿಕಾರುವಂತೆ ಮಾಡಿತ್ತು. ಶಂಕರನ ಮೇಲೆ ರುದ್ರಮ್ಮನು ಮತ್ತಿಷ್ಟು ಹಲ್ಲು ಮಸೆಯಲು ಕಾರಣವೆಂದರೆ ಶಂಕರನ ಮನೆಯವರು ರುದ್ರಮ್ಮನಿಗೆ ಸಲ್ಲಬೇಕಾದ ಮರ್ಯಾದೆಯನ್ನು ಸಲ್ಲಿಸಿರಲಿಲ್ಲ. ಅವಳ ಮಗಳ ಮದುವೆಯಲ್ಲಿಯೇ ಅವಳಿಗೊಂದು ಬೆಲೆಬಾಳುವ ಐದಾರುನೂರು ರೂಪಾಯಿಯ ಪೀತಾಂಬರ ಕೊಡದೆ ನೂರು ರೂಪಾಯಿಯ ಒಂದು ರೇಶಿಮೆ ಸೀರೆಮಾತ್ರ ಕೊಟ್ಟಿದ್ದರು. ಇದೆಲ್ಲಕ್ಕೂ ಕಳಸವಿಟ್ಟಂತೆ, ಮದುವೆಯ ಕಾಲಕ್ಕೆ ಶಂಕರ "ಆಕೆಯ ಪಾದಗಳಿಗೆ ನಮಸ್ಕಾರ ಸಹ ಮಾಡುವುದಿಲ್ಲ...." ಎಂದು ಸ್ಪಷ್ಟವಾಗಿ ಹೇಳಿದ್ದನು.

"ಇವ ಸಾಲೀ ಕಲ್ತ ದೊಡ್ಡ ಶಾಣ್ಯಾ ಆದರ ನಮಗೇನು ಬಂತು? ಹಿರ್‍ಯಾರು ಕಿರ್‍ಯಾರು ಅನ್ನೂದು ಸತೇಕ ತಿಳಕೊಳ್ಳಬಾರದೇ? ನನ್ನ ಕಾಲಿಗೆ ಸತೇಕ ಬೀಳುದುಲ್ಲ ಅಂತ ಹೇಳಿದನಲ್ಲಾ? ಎಷ್ಟು ಸೊಕ್ಕು ಐತಿ ಇವಗೆ? ಶ್ರೀಮಂತರಿದ್ದರ ತಮ್ಮ ಮನೀಗಿದ್ದಾರು. ನಮಗೇನು ಬಂತು ಅದರಲಿಂದ?" ಎಂದುಕೊಳ್ಳುತ್ತಿದ್ದಳು ರುದ್ರಮ್ಮ.

ಶಂಕರನ ಮೇಲೆ ಮತ್ತು ಅವರ ಮನೆಯವರ ಮೇಲೆ ಹೇಗೆ ಸೇಡು ತೀರಿಸಿಕೊಳ್ಳಬೇಕು? ಎಂದು ವಿಚಾರ ಸಾಗರದಲ್ಲಿ ಮುಳುಗಿದ ಅವಳ ರಾಜ್ಯವೇ ಬೇರೆಯಾಗಿತ್ತು. ರಕ್ಷಸೀ ಜಿವನವೇ ಜಿವನ. ಆಶೆ, ಆಕಾಂಕ್ಷೆ, ದ್ವೇಷ, ಈರ್ಷೆಗಳಿಂದ ಜೀವನ ಸಾಗಿಸಬೇಕೆಂಬುದೇ ಮಾನವ ಸಹಜವಾದ ಅವಳ ಮನೋರಾಜ್ಯದ ಅಭಿಲಾಷೆಯಾಗಿತ್ತು. ಬೇರೆ ಜೀವಿಯ ಜೀವನವನ್ನು ಹರಣ ಮಾಡಿಯಾದರೂ ತಮ್ಮ ಉತ್ಕಟೇಚ್ಛೆಯನ್ನು ಕೈಗೂಡಿಸಿಕೊಂಡು ಕೃತಕೃತ್ಯರಾಗುವದೇ ಪಾವನ. ಹೇಗಾದರೂ ದುಡ್ಡುಗಳಿಸಿ ತೃಪ್ತಿಯಿಲ್ಲದ ಹೀನತನದ ಜೀವನವನ್ನು ಸಾಗಿಸುವದೇ ಮುಕ್ತಿ. ಇಂತು ವಿಚಾರಿಸುತಿದ್ದ ಅವಳು, ಶಂಕರನ ಸ್ಥಾನದಲ್ಲಿ ಶೇಖರನನ್ನು ಕಂಡು ಕೊಂಡಳು. ಅವಳಿಗೆ ಅದೇ ಯೋಗ್ಯ, ಅದೇ ಉಚಿತವೆನಿಸಿತು. ಆಯಿತು. ವಿಕಾರದ ಕುದುರೆ ಗಿದ್ದ ವಿವೇಕದ ಕಡಿವಾಣ ಅವಳ ಕೈಯಿಂದ ಜಾರಿತು. ದ್ವೇಷದ ಕಿಚ್ಚಿಗೆ ಈರ್ಷೆಯ ಗಾಳಿಯು ಬೀಸಿತು.

ಶಂಕರನು ಕುಳಿತ ಕುದುರೆಯ ಗಾಡಿಯು ಮನೆಯ ಮುಂದೆ ಬಂದು ನಿಂತಿತು. ತನ್ನ ಪ್ರತಿಬಿಂಬದ ಬದಲು ಶಕರನ ಪ್ರತಿಬಿಂಬವನ್ನೇ ಕನ್ನಡಿಯಲ್ಲಿ ಕಾಣುತ್ತಾ ಲಜ್ಜೆಪೂರಿತ ನಗೆಬೀರುತ್ತ ಸಿಲುಗನ್ನಡಿ ಮುಂದೆ ನಿಂತಿದ್ದ ಸರೋಜಳು ಗಾಡಿನಿಂತ ಸಪ್ಪಳವನ್ನು ಕೇಳಿ ಆಟ್ಟದಿಂದ ದಡಭಡನೆ ಕೆಳಗೆ ಓಡಿ ಬಂದಳು.

ಶಂಕರನ ಮುಖ ನೋಡುವದಕ್ಕೆ ಲಜ್ಜೆಪಟ್ಟುಕೊಂಡು ಒತ್ತಾಯದಿಂದ ಮುಖ ಕೆಳಗೆ ಮಾಡಿದರೂ ಅಕೆಯ ಕಣ್ಣುಗಳು ಮಾತ್ರ ಆಕೆಯ ಹಿಡಿತವನ್ನು ತಪ್ಪಿಸಿಕೊಂಡು, ಕಳ್ಳತನದಿಂದ ಅವನನ್ನು ನೋಡಿದವು. ಇಬ್ಬರ ದೃಷ್ಟಿಯೂ ಕೂಡಿತು. ಇಬ್ಬರ ಮುಖದಲ್ಲಿಯೂ ಒಂದು ಮುಗುಳು ನಗೆ ಹೊರಹೊಮ್ಮಿತು. ನಲ್ಲೆಯ ನಗುಮುಖವನ್ನು ನೋಡಿದೊಡನೆಯೇ ಶಂಕರನ ಹಸಿವೆ ನೀರಡಿಕೆಗಳು ಎಲ್ಲ ಮಾಯವಾದವೋ? ಪ್ರವಾಸದಿಂದಾದ ಬೇಸರ ಎತ್ತ ಕಾಲುಕಿತ್ತಿತೋ? ರುಪ್ರಮ್ಮ ಮಾತ್ರ ಶಂಕರನನ್ನು ನುಂಗಿ ನೀರು ಕುಡಿಯುವಂತೆ ನೆಟ್ಟ ದೃಷ್ಟಿಯಿಂದ ನೋಡುತ್ತ ಬಾಗಿಲ ಬಳಿಯಲ್ಲಿಯೇ ಕುಳಿತು ಕೊಂಡಿದ್ದಳು.

ಶಂಕರ ಊಟ ತೀರಿಸಿಕೊಂಡು, ಅಟ್ಟದ ಮೇಲಿನ ಸರೋಜಳಕೋಣೆಗೆ
ಬಂದನು. ಕೋಣೆಯಲ್ಲಿಯ ದೀಪ ಶಾಂತವಾಗಿತ್ತು. ಹೊರಗೆ ಗ್ಯಾಲರಿಯಲ್ಲಿ
ತಿಂಗಳಿನ ತಂಬೆಳಕು ಹರಡಿತ್ತು. ಶಂಕರನು ಹೊರಗೆ ಗ್ಯಾಲರಿಯ ಮೇಲೆ
ಹೋಗಿ ಅಲ್ಲಿಯೇ ಇದ್ದ ಒಂದು ಕುರ್ಚಿಯ ಮೇಲೆ ಕುಳಿತುಕೊಂಡನು. ಅವ
ನೆದುರಿಗೆ ಒಂದು ಟೆಬಲ್ಲು ಇತ್ತು. ಅದರ ಮೇಲೆ ಕೈ ಕುಸುರಿನ ವಸ್ತ್ರ ಹಾಸಿ
ಎಲೆಅಡಿಕೆಯ ತಾಟನ್ನು ಇಡಲಾಗಿತ್ತು. ಶಂಕರನು ಶಾಂತವಾಗಿ ತಾಂಬೂ
ಲನ್ನು ಮೆಲ್ಲುತ್ತ ಸಿಗರೇಟನ್ನು ಹಚ್ಚಿದನು. ಹೊಗೆಯನ್ನು ಗುಂಗುರು
ಗುಂಗುರಾಗಿ ಬಿಡುತ್ತಾ ತನ್ನ ಜಾಣ್ಮೆಯಬಗ್ಗೆ ತಾನೇ ಮೆಚ್ಚುತ್ತಾ
ಕುಳಿತುಕೊಂಡಿದ್ದನು. ಯಾರೋ ಅಟ್ಟಹತ್ತಿ ಬಂದಂತಾಯಿತು. ಕರ
ವಸ್ತ್ರದಿಂದ ತೀವ್ರ ಹೊಗೆಯನ್ನು ಅತ್ತಿತ್ತಮಾಡಿ ಸಿಗರೇಟನ್ನು ಮುಚ್ಚಿ
ಕೊಂಡು ಸೋಪಾನದ ಕಡೆಗೆ ನೋಡಿದನು. ಸರೋಜಳು ನಗುತ್ತ ಬರು
ತ್ತಿದ್ದಳು. ಅವಳ ಕೈಹಿಡಿದು ಜಗ್ಗಿ ತನ್ನ ಮಗ್ಗುಲದಲ್ಲಿಯೇ ಇದ್ದ
ಮತ್ತೊಂದು ಕುರ್ಚಿಯ ಮೇಲೆ ಕೂಡ್ರುವಂತೆ ಮಾಡಿದನು. ಅವಳು
ನಾಚಿಕೆಯಿಂದ ಹಿಂದಕ್ಕೆ ಸರಿದಂತೆ ಮಾಡಿದರೂ ಮುಂದೆ ಬಂದು ಕುರ್ಚಿಯ
ಮೇಲೆ ಕುಳಿತುಕೊಂಡಳು. ಶಂಕರನು ಮತ್ತೊಮ್ಮೆ ಸಿಗರೇಟನ್ನು ಜಗ್ಗಿ
ಅವಳ ಮುಖಕ್ಕೆ ಹೊಗೆಯನ್ನು ಬಿಟ್ಟನು. ಅವಳು ಕೆಮ್ಮುತ್ತ ತನ್ನ ಕೈಯ
ಲ್ಲಿದ್ದ ಪುಸ್ತಕವನ್ನು ಟೇಬಲ್ಲಿನ ಮೇಲಿಟ್ಟು ಕೈವಸ್ತ್ರವನ್ನು ಬಾಯಿಗೆ ಹಿಡಿದು
ಕೊಂಡಳು. ಅವಳು ಈ ಪ್ರಕಾರ ಕೆಮ್ಮುತ್ತಿರುವದನ್ನು ನೋಡಿ ಶಂಕರನು
ನಗಹತ್ತಿದನು. ಅವಳ ಮುಖದಲ್ಲಿ ಹುಸಿಕೋಪ ಮುಗುಳು ನಗೆಯೊಡನೆ
ಮೂಡಿತು. ಸಿಟ್ಟಿಗೆದ್ದುದನ್ನು ತೋರಿಸುವದಕ್ಕೆಂದೋ ಏನೋ? ಮುಖವನ್ನು
ಚಂದ್ರನಕಡೆಗೆ ಹೊರಳಿಸಿದಳು. ಚಂಬೆಳಕು ಅವಳ ಮುಖದ ಮೇಲೆ ಬಿದ್ದು
ಆಕೆಯ ಮುಖಕ್ಕೆ ಮತ್ತಿಷ್ಟು ಕಾಂತಿಯನ್ನು ಕೊಟ್ಟಿತು.

ತರುಲತೆಗಳು ತಂಗಾಳಿಯ ಒತ್ತಾಯದ ಮೂಲಕ ಒಂದನ್ನೊಂದು
ಅಪ್ಪಿಕೊಂಡು ಅಂದಿನ ಅಂದದ ತಿಂಗಳಿನ ತಂಬೆಳಕನ್ನು ಅನುಭವಿಸುತ್ತಿದ್ದವು
ಇದು ಸರೋಜಳಿಗೆ ತಿಳಿಯಿತೋ ಏನೋ? ಅವಳು ಒಮ್ಮೆಲೇ ತನ್ನ ಮುಖ
ವನ್ನು ಶಂಕರನತ್ತ ಹೊರಳಿಸಿದಳು. ಅವಳ ಆ ಮದಭರಿತ ನೋಟ ಅವ
ನನ್ನು ಏನೋ ಕೇಳಿದಂತಾಯಿತು. ಅವಳ ರಕ್ತರಂಜಿತ ಅಧರಗಳು ಸೊನ್ನೆ

ಮಾಡಿದಂತಾಯಿತು. ಕಪೋಲಗಳು ಕೆಂಪೇರಿದವು. ಸರೋಜಳು ಒಮ್ಮೆಲೇ ತನ್ನ ಕೆಳದುಟಿಯನ್ನು ಕಚ್ಚಿಕೊಂಡು ಕೆಳಗೆ ಮುಖಮಾಡಿದಳು. ಅವಳ ದೃಷ್ಟಿಯನ್ನೇ ಹಿಂಬಾಲಿಸಿದ ಶಂಕರನ ದೃಷ್ಟಿಗೆ ಅವಳು ಟೇಬಲ್ಲಿನ ಮೇಲೆ ತಂದಿಟ್ಟ "ಚೆಂದುಟಿಯ ಮುತ್ತು" ಕಾಣಿಸಿ ಕೊಂಡಿತು. ಅದನ್ನು ಕಾಣು ತ್ತಲೇ ಅವನಮುಖವು ಆನಂದದಿಂದ ಮತ್ತಿಷ್ಟು ಅರಳಿತು. ಎದೆಯ ಬಡಿತ ದಿಂದ ಅವಳ ನೋಟದ ಪ್ರಶ್ನೆಗೆ ಉತ್ತರಿಸಿದನು. ಸರೋಜಳು ಮೀಸಲಿದ್ದ ತನ್ನಬಾಹು ಮಾಲೆಯನ್ನು ಶಂಕರನ ಕೊರಳಿಗೆ ಅರ್ಪಿಸಿದಳು. ಶಂಕರ ಸರೋಜರಿಬ್ಬರೂ ಜ್ಯೋತ್ಸ್ನಾ ಸಾಮ್ರಾಜ್ಯದ ಅರಸು ಅರಸಿಯರಂತೆ ಎಷ್ಟೋ ಹೊತ್ತು ಗ್ಯಾಲರಿಯಲ್ಲಿಯೇ ಕಳೆದು, ನಿದ್ರಾದೇವಿಯು ಕರೆಗೆ ಓ ಕೊಟ್ಟು ಒಳಗೆ ಹೋದರು.

"ನೀನು, ನಿನಗೆ ಜನ್ಮವಿತ್ತವರ ಸಲುವಾಗಿ ಸ್ವಾರ್ಥತ್ಯಾಗಮಾಡಲು ಸಿದ್ಧಳಿರುವಿಯಾ?"

"........................."

"ತಾಯಿ ತಂದೆಗಳ ಆಶೆಯನ್ನು ಪೂರ್ಣಗೊಳಿಸುವುದೇ ಮಕ್ಕಳ ಮೊದಲನೆಯ ಕೆಲಸ. ಜೀವವಿತ್ತವರಿಗೆ ಜೀವವನ್ನು ಕೊಡಲೇ ಬೇಕಲ್ಲವೇ?

"........................."

"ನನ್ನ ಮನಸ್ಸಿನ ವಿರುದ್ಧ ನಿನ್ನ ಮದುವೆಯಾಗಿರುವದು. ಅದಕ್ಕಾಗಿ ನಾನು ನಿನ್ನ ಗಂಡನನ್ನು ಕೊಲ್ಲಿ..........."

"ಇಲ್ಲ, ಇದು ಏಳು ಜನ್ಮದಲ್ಲಿಯೂ ಶಕ್ಯವಿಲ್ಲ."

"ಎ....ಹಿಂದಕ್ಕೆ ಸರಿ....ನನ್ನ ಗಂಡನನ್ನು ಕೊಲ್ಲಲು ಹೋಗುವಿಯಾ? ನನ್ನ ಜೀವನವನ್ನೇ ಹಾಳುಮಾಡಲು ಬಂದಿರುವಿ ನೀನು ನನ್ನ ತಾಯಿಯಲ್ಲ ಮಾಯಿ .... ಮಾರಿ. ಸರಿ....ಹಿಂದಕ್ಕೆ .... ಸರಿಯುವದಿಲ್ಲವೇ? ಅಯ್ಯೋ..... ಕೊಂದಳು!" ಎಂದು ಚಿಟ್ಟನೆ ಚೀರಿದಳು. ಶಂಕರನಿಗೆ ಒಮ್ಮೆಲೇ ಎಚ್ಚರಾ ಯಿತು. ದೀಪಹಚ್ಚಿ ನೋಡುತ್ತಾನೆ. ಸರೋಜಳ ದೇಹವೆಲ್ಲ ಕಂಪಿಸ ಹತ್ತಿತ್ತು. ಮುಖವೆಲ್ಲವೂ ಬೆವತು ಗಾಬರಿಗೊಂಡಂತಿತ್ತು. ಕೂಡಲೇ ಸರೋಜ ಳನ್ನು ಶಂಕರ ಎಚ್ಚರಮಾಡಿದನು.

"ಯಾಕೆ? ಏನಾಯಿತು? " ಕೇಳಿದ ಶಂಕರ.

ಎಚ್ಚರಗೊಂಡ ಸರೋಜಳು ತನ್ನ ದೃಷ್ಟಿಯನ್ನೇ ತಾನು ನಂಬಲಾರ ದವಳಂತೆ ಶಂಕರನ ಮುಖವನ್ನೇ ದಿಟ್ಟಿಸಿ ನೋಡಹತ್ತಿದಳು.

"ಯಾಕ? ಏನಾಯಿತು? ಚೀರಿದಿ. ಕನಸಗಿನಸ ಬಿದ್ದಿತ್ತೇನು?'' ಮತ್ತೊಮ್ಮೆ ಕೇಳಿದ ಶಂಕರ.

" ಹೌದು ಬಾಳಕೆಟ್ಟಕನಸು. ನಮ್ಮ ಅಪ್ಪನs ನಿಮ್ಮನ್ನ ಕೊಲ್ಲಾಕ ಬಂದಂತಾಗಿತ್ತು! " ಎಂದಳು ಸರೋಜ.

" ಎಂತಹ ಹುಚ್ಚಿ ಅದೀಯ ನೀನು? ಎಷ್ಟು ಹೆದರೀಯಲ್ಲಾ. ಕನಸಿಗೆ ಸಹೇಕ ಹೆದರತೀಯಲ್ಲಾ?'' ಎಂದು ನಗಹತ್ತಿದ ಶಂಕರ. ಆದರೆ ಸರೋಜಳಿಗೆ ಮಾತ್ರ ನಗೆಬರಲಿಲ್ಲ. ಅವಳು ಭಯಂಕರ ಹೆದರಿದಳು. ಮುಂದಾಗುವ ಅಶುಭ, ಕನಸಿನಲ್ಲಿ ಕಾಣಿಸಿಕೊಳ್ಳುತ್ತವೆ-- ಎಂದು ನಂಬಿದ ಅವಳ ಚಿಕ್ಕ ಹೃದಯ ಅಂಜಿಕೆಯಿಂದ ತತ್ತರಿಸಹತ್ತಿತು. ಶಂಕರ ಅವಳಿಗೆಷ್ಟು ಸಮಾ ಧಾನ ಹೇಳಿದರೂ ಅವಳಿಗೇನು ಸಮಾಧಾನವಾಗಲಿಲ್ಲ. ನಿದ್ದೆಯೂ ಬರಲಿಲ್ಲ.

ಕೋಳಿಕೂಗಲು, ಹಕ್ಕಿಗಳು ತಮ್ಮ ಹಾಡನ್ನು ಶೂನ್ಯದಲ್ಲಿ ತೇಲು ಬಿಡುತ್ತಿರಲು ಬೆಳಗಾಯಿತು. ಸರೋಜಳು ನಿರ್ವಾಹವಿಲ್ಲದೇ ಮೇಲೆದ್ದು ಮನೆಗೆಲಸದಲ್ಲಿ ತೊಡಗಿದ್ದರೂ ಆಕೆಯ ಹೃದಯದಮೇಲೆ ಅಂದಿನ ಆ ಕೆಟ್ಟಕನಸು ಉಂಟುಮಾಡಿದ ಆಘಾತ ಮಾತ್ರ ಮಾಯವಾಗಿರಲಿಲ್ಲ. ಇದೊಂದು ಶಂಕರನಿಗೆ ಒಳ್ಳೇನೆವ ಸಿಕ್ಕಂತಾಯಿತು. " ಅಂಜುಬುರಕಿ '' ಎಂದು ಅವಳನ್ನು ಮತ್ತಷ್ಟು ಪೀಡಿಸಿ ನಗೆಯಾಡಹತ್ತಿದನು. ಶಂಕರನ ಈ ತರದ ಸಲಿಗೆಯಿಂದ ಅವಳ ಹೃದಯವು ಸ್ವಲ್ಪ ಹಗುರಾದರೂ ಮೊದಲಿನ ಉತ್ಸಾಹ ಮಾತ್ರ ಬರಲಿಲ್ಲ.

ಸರೋಜಳ ತಂದೆಗೆ ಅಂದು ಬಿಜಾಪುರದಲ್ಲಿ ಏನೋ ಕೆಲಸ ಬಿದ್ದದ್ದ ರಿಂದ ಮುಂಜಾನೆಯೇ ಹೊರಟು ಹೋಗಿದ್ದರು. ರುದ್ರಮ್ಮ ಅಳಿಯನಿಗೆ ಬಹಳ ಉಪಚಾರವನ್ನೇ ಮಾಡಿದಳು. ಮುಂಜಾನೆ ಬಿಸಿ ಬಿಸಿ ಉಪ್ಪಿಟ್ಟು ಚಹಾಮಾಡಿಕೊಟ್ಟಳು. ಅಳಿಯನಿಗೆ ಊಟಕ್ಕೆಂದು ತಾನೇ ಸ್ವತ. ಉಂಡಿ ಯನ್ನು ತಯಾರಿಸಿದಳು. ಅವಳು ತನಗೆ ಈಪ್ರಕಾರ ಪ್ರೀತಿ ತೋರಿಸುತ್ತಿರುವದನ್ನು ಕಂಡು ಶಂಕರನು ಮತ್ತಷ್ಟು ಹರುಷಗೊಂಡನು.

ಊಟದ ವೇಳೆಯಾದ್ದರಿಂದ ಶಂಕರನೂ ಸ್ನಾನ ತೀರಿಸಿಕೊಂಡು ಬಂದನು. ರುದ್ರವ್ವ ಸರೋಜಳನ್ನು ಕರೆದು...........

"ಶಂಕರಗ ನೀನs ಊಟಕ್ಕ ನೀಡು. ನಾನು ಗುಡಿಗೆಹೋಗಿ ಬಿಗೂನ ಬರತೇನಿ. ಕಪಾಟಿನೊಳಗೆ ಉಂಡಿಮಾಡಿ ಇಟ್ಟೇನಿ. ಮುರತೀ ಮತ್ತs? ನೀ ತಿಂದು ಬೇಸರಾಗೆದ ಒಲ್ಲೆ ಅಂದ-ಗಿಂದಾನು, ಅವನದು ಊಟ ಆಗುವ ವರೊಳಗ ನಾ ಬರ್ತೇನಿ. ಇಬ್ಬರೂ ಕೂಡಿಯೇ ಊಟಾಮಾಡೂನು" ಎಂದು ಹೇಳಿ ಹಣ್ಣುಕಾಯಿಗಳನ್ನು ತೆಗೆದುಕೊಂಡು ಗುಡಿಗೆ ಹೊರಟಳು. ಮತ್ತೆ ತಿರುಗಿಬಂದು "ಮುರತೀ ಮತ್ತ ಉಂಡಿನೀಡುದನ್ನ ಅಂದ್ಯಾ? ನೀನು ಊಟಾ ಮಾಡಿಗೀಡಿ?" ಎಂದು ಮುತ್ತೊತ್ತೆವ್ವ ಎಚ್ಚರಿಕೆ ಕೊಟ್ಟು ಹೋದಳು.

ಶಂಕರ ಊಟಕ್ಕೆ ಕುಳಿತು ಕೊಂಡ. "ನಿಮ್ಮವ್ವ ಉಂಡೀ ಸುದ್ದಿ ಬಾಳ ಹೇಳಾಕ ಹತ್ಯಾಳ. ಯಾವ ಯಾವ ಉಂಡೀ ಮಾಡ್ಯಾಳ ನೋಡೂನು ತಗೊಂಡು ಬಾ ಇಲ್ಲೆ" ಅಂದ ಸರೋಜಳಿಗೆ. ಸರೋಜಳು ಕಪಾಟಿನಲ್ಲಿ ಇದ್ದ ಉಂಡಿಯ ತಾಟನ್ನು ತೆಗೆದುಕೊಂಡು ಬಂದಳು.

ನಾಲ್ಕೂ ಗೋಡೆಗಳು ಏನೂ ಗೊತ್ತಿಲ್ಲದಂತೆ ಸುಮ್ಮನೇ ನಿಂತಿದ್ದವು. ಮೇಲಿನ ಕಿಡಿಕೆಯಿಂದ ಬಿದ್ದ ದಿನಮಣಿಯ ಬಿಸಿಲನ್ನು ತುಂಡು ಮೋಡವು ತೂಗಿ ಬಂದು ಕರೆದೊಯ್ಯಿತು. ಬೇಸನ ಉಂಡಿ ಅಂಟಿನ ಉಂಡಿ ತಂದು ಸರೋಜಳು ಬಳಿಯಲ್ಲಿ ಇಟ್ಟುಕೊಂಡಳು. ಶಂಕರನ ಬಾಯಲ್ಲಿ ನೀರೂರಿದವು.

"ಮೊದಲ ಉಂಡೀನs ನೀಡ ನಮಗ. ಮತ್ತೇನು ಬ್ಯಾಡ" ಅಂದನು.

ಸರೋಜಳು ಎರಡು ಉಂಡಿಗಳನ್ನು ನೀಡಿದಳು. ಎರಡೂ ಉಂಡಿಗಳನ್ನು ತಿಂದು ಮುಕ್ತೋಂಮ ನೀಡಿಸಿಕೊಂಡನು.

"ನೀನು ತಿನಬಾರs-ಎಂಥಾ ಛಲೋ ಆಗ್ಯಾವ ಉಂಡಿ" ಎಂದನು ಸರೋಜಳಿಗೆ.

"ನಾನೂ ಅವ್ವ ಕೂಡಿ ಊಟಾ ಮಾಡತೇವಿ. ನೀವು ಊಟಾ ಮಾಡ್ರಿ" ಎಂದಳು ಸರೋಜಾ.

"ಸುಮ್ಮಕ ಬಾರs-ನಿಮ್ಮವ್ವನ ಕೂಡ ಬೇಕಾದ್ರ ಮುತ್ತೊವ್ವ ಊಟಾ ಮಾಡೂವಂತಿ."

"ನಾ ಈಗ ಒಲ್ಲೆ"

"ಹಾಂಗಾದ್ರ ನಾನೂ ಊಟಾನ ಇಷ್ಟಕ್ಕ ಬಿಟ್ಟ ಬಿಡತೇನಿ" ಎಂದು ಮೋಲೇಳ ಹತ್ತಿದನು.

ನಿರ್ವಾಹವಿಲ್ಲದೇ ಒಲ್ಲೆ ಒಲ್ಲೆ ಎನ್ನುತ್ತ ಸರೋಜಳು ಬಂದು ಅವನ ಸಮೀಪದಲ್ಲಿಯೇ ಕುಳಿತುಕೊಂಡಳು. ಶಂಕರ ತನ್ನ ಕೈಯಿಂದಲೇ ಅವಳಿಗೆ ಒಂದು ಉಂಡಿಯನ್ನು ತಿನ್ನಿಸಿದನು. ತಾನು ಮತ್ತೆರಡು ಉಂಡಿಗಳನ್ನು ತಿಂದನು. ಸರೋಜಳಿಗೂ ರುಚಿ ಹತ್ತಿದ್ದರಿಂದ ಅವಳೂ ನಗುತ್ತ ಉಂಡಿಯನ್ನು ತಿನ್ನಹತ್ತಿದಳು. ಅಷ್ಟರಲ್ಲಿಯೇ ರುದ್ರಮ್ಮ ಗುಡಿಯಿಂದ ತಿರುಗಿ ಬಂದಳು. ಅವಳು ಅಲ್ಲಿ ಕಂಡದ್ದೇನು? ಸರೋಜ ಶಂಕರರಿಬ್ಬರೂ ನಗುತ್ತ ಕೆಲೆಯುತ್ತ ಉಂಡೆಯನ್ನು ತಿನ್ನಹತ್ತಿದ್ದಾರೆ! ಅವಳ ಕೈಯಲ್ಲಿದ್ದ ಹೂ ಕಾಯಿಗಳಿದ್ದ ತಾಟು ಒಮ್ಮೆಲೇ ನೆಲಕ್ಕೆ ಬಿತ್ತು. ಅಡಿಗೆಯ ಮನೆಗೆ ಓಡಿ ಬಂದವಳೇ,

"ನೀನೂ ಉಂಡೆಯನ್ನು ತಿಂದೆಯಾ–ಅದರಲ್ಲಿ ವಿಷವಿತ್ತು!" ಎಂದು ಒಮ್ಮೆಲೆ ನೆಲಕ್ಕೆಉರುಳಿದಳು.

ಶಂಕರ ಸರೋಜರಿಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಹತ್ತಿದರು. ಸಾವಿನ ಭಯಪೂರಿತ ತಾಂಡವ ನೃತ್ಯ ಅವರ ಮುಖದಲ್ಲಿ ತಾಂಡವವಾಡುತ್ತಿತ್ತು.

ಪೋಸ್ಟಮನ್ನನು ಶಂಕರನ ಕುಶಲವಾರ್ತೆ ಕೇಳಿದ ತಾಯಿಯ ಪತ್ರವನ್ನು ಒಗೆದು ಹೋದನು.

—— ಬೆಲ್ಲದ. ಜಿ. ಆರ್.

ಎರಡನೆಯ ಎಸಳು

# ಹುಚ್ಚ ಹುಡುಗ

"ಎದ್ದೇನಪ್ಪಾ ಹಿರಿಯ?"

"ಎದ್ನಿ. ಎದ್ಯಾ?"

"ಹುಂ. ಇದಕ್ಕ ಎದ್ದು ಅಟು ತಂಗಳ ಗಂಜಿ ಕುಡದವ್ನ ಹೊಂಟೇನಿ."

"ಊಟ ಹರೇ ಹೊತ್ತ್ಯಾಗ ಎತ್ಲಾಗ ಹೊಂಟಲಾ?"

"ಧನೇರ ಹೊಲಕ ಹೊಂಟೇನಿ ಕಂಟೀ ಕಡಿಲಾಕ. ನಾಳೆ ಗಳೇ ಬರತಾವಂತ ಹರಗಲಾಕ. ಅದಕ್ಕ ಅಟು 'ಸಾಪ ಮಾಡಿ ಬಾ' ಅಂದರ. ಇಲ್ಲೇ ಹೆಟ್ಟದ್ದಾರಿ ಹೊಲಕ ಹೊಂಟೇನಿ. ಏನ್ ದುಗ್ಯಾರ್ಯ ಹೊರಗ ಹೋಗ್ಯಾಸೇನ್?" ಎನ್ನುತ್ತಾ ಡ್ಯಾಮಪ್ಪ, ಮುದುಕ ಮರಿಯಪ್ಪನ ಮಗ್ಗುಲದಲ್ಲಿ

ಕುಳಿತ. ಮತ್ತು ತನ್ನ ಕಿವಿಯ ಮೇಲಿದ್ದ ಕೊರಬೀಡಿ ತೆಗೆದು ಬಾಯಲ್ಲಿಟ್ಟುಕೊಂಡ. ಅವನ ಇಚ್ಛೆಯನ್ನು ತಿಳಿದ ಮರಿಯಪ್ಪ ಎದ್ದು ಒಳಗೆ ಹೋಗಿ ಸ್ವಲ್ಪ ಬೆಂಕಿ ತಂದುಕೊಟ್ಟು "ಉಶ್ಯಪ್ಪಾ" ಎನ್ನುತ್ತಾ ಬಿಸಿಲಿಗೆ ಮೈಯೊಡ್ಡಿಕೊಂಡು ಕುಳಿತುಕೊಂಡ.

ದ್ಯಾಮಪ್ಪ ಬೀಡಿ ಹಚ್ಚಿಕೊಂಡು, ಜಗ್ಗಿ–ಹೊಗೆ ಬಿಟ್ಟು, ಕೇಳಿದ ಮರಿಯಪ್ಪನಿಗೆ—

"ದುರ್ಗ್ಯಾಗ ಚಾಕರಿ ಎಲ್ಲಿ ಹಿಡದಾನೀಗ?"

"ಏನ ಮಾಡತಿಲಾ ನಮ್ಮ ಹುಡುಗನ ಕತೀ ತಗೊಂಡ!-ಅವನ ಮನ ಸಿನ್ಯಾಗ ಎನೈತಿ ಅನ್ನೂದs ತಿಳಿವಲ್ಲದು. ಧನ್ಯಾರ ಚಾಕರಿ ಬಿಟ್ಟ ಮ್ಯಾಲೆ ಮತ್ತೆಲ್ಲಿ ದಗದಾನೂ ಹಿಡಿಲಿಲ್ಲ. ಬೆಳ್ಳಬೆಳತನಕ ಹೊರಗ ಹೋಗತಾನ ಪಿರಿಪಿರಿ ತಿರುಗಿಕೊಂತ, ಕಾಲಿಗೆ ಬಾರದ ಕತ್ತಿಯಂಗ. ಹಕ್ಕಾಹಗಲೆಲ್ಲಾ ಮಕ್ಕೊಂತಾನ. ನಿನ್ನೆ ಒಂದ ಮೂರು ಚಂಜಿಲೇ ಮನೀ ಬಿಟ್ಟು ಹೊರಬಿದ್ದಾವಾ ಬೆಳ್ಳಿಚಿಕ್ಕಿ ಮೂಡಿದಮ್ಯಾಕ ಬಂದಾನ ಮನೀಗೆ. ತಿರುಗಿ ಸೂರಜ್ಯಾ ಮ್ಯಾಕ ಬಂದರೂ ಇನ್ನೂ ಎದ್ದಿಲ್ಲ!'' ಎಂದು ನಿಟ್ಟುಸಿರು ಹಾಕಿದ ಮರಿಯಪ್ಪ.

"ಏನರ ದಗದಾ ಹಿಡಿದಿದ್ದಾನೇಳ, ಅದಕs ಹೊಕ್ಕಿದ್ದಾನು. ಇಲ್ಲಿ ಕಂದ್ರ ಕೆಲಸೇನೈತಿ ತಿರಗೂದು ರಾತ್ರೇಲ್ಲಿ?'' ಎಂದ ದ್ಯಾಮಪ್ಪ ಸಮಾಧಾನ ಪಡಿಸುವ ಧ್ವನಿಯಲ್ಲಿ.

"ಎಲ್ಲಿ ದಗದೋ ಮಾರಾಯಾ? ನಾಕ ತಿಂಗಳ ಹೊತ್ತಾತು. ಒಂದಂ ಬಡಿ–ಹುಟ್ಟೋಜಿಲ್ಲ. ಏನರ ಅಂದರ ಪಿಸಂಗನ ಹೊರಗ ಹೋಗತಾನ ಎಲ್ಲಿ ರತಾನೋ–ಏನಮಾಡತಾನೋ ದೇವರಿಗೇ ಗೊತ್ತು!" ಎಂದು ಮತ್ತೊಂದು ನಿಟ್ಟುಸಿರು ಬಿಟ್ಟ ಮರಿಯಪ್ಪ.

ಇನ್ನು ಹೀಗೆ ಕೂತರೆ ಈ ಮುದುಕನ ಮಾತು ಮುಗಿಯುವದಿಲ್ಲೆಂದು, ದ್ಯಾಮಪ್ಪ "ಬಿಸಿಲು ಏರಿತು. ಇನ್ನು ಹೋಗ್ತೇನಿ'' ಎಂದು ಹೊರಟು ಹೋದ.

"ಹೋಗು" ಎಂದು ಗೋಣು ಅಲ್ಲಾಡಿಸಿ ಹಾಗೇ ಕುಳಿತುಕೊಂಡ ಮರಿಯಪ್ಪ.

ಶೂನ್ಯದೃಷ್ಟಿಯಿಂದ ಮರಿಯಪ್ಪ ಹಾಗೇ ದಿಟ್ಟಿಸಿ ನೋಡ ಹತ್ತಿದ್ದಾನೆ ಎದುರಿಗೆ ಇರುವ ಬೇವಿನ ಗಿಡವನ್ನು. ಹಾಗೇ ದೃಷ್ಟಿ ದ್ಯಾಮನ ಝೋಪಡಿಯ ಮೇಲೆ ಬಿತ್ತು. ಒಳಗೆ ದ್ಯಾಮನ ಹೆಂಡತಿ ಅಡಿಗೆ ಮಾಡುತ್ತಿರುವ ಕೆಂಬುದನ್ನು ಸಾರುತ್ತಾ, ಚಪ್ಪರದ ಗುಂಟ ಹೊಗೆ ಸುರುಳಿ ಸುರುಳಿಯಾಗಿ ಏಳಹತ್ತಿದೆ. ಅದನ್ನು ಕಂಡು ಮರಿಯಪ್ಪನಿಗೆ ಮತ್ತಷ್ಟು ಕೆಡಕೆನಿಸಿತು. ತನ್ನ ಹೆಂಡತಿ ಇನ್ನೂ ಜೀವಂತ ಇದ್ದ ಕಾಲ ನೆನಪಿಗೆ ಬಂದಿತು. ಕಲ್ಲಮ್ಮನ ಚಿತ್ರ ಕಣ್ಣಿಗೆ ಕಟ್ಟಿತು.

ಬಹಳ ದಿನಕ್ಕೆ ಮಗ್ಯಾ ಹುಟ್ಟಿದ್ದಾನೆ—ಮರಿಯಪ್ಪ ಕಲ್ಲವ್ವನ ಪ್ರೇಮದ ಪ್ರತೀಕವಾಗಿ. ಮಗ ಹುಟ್ಟಿದನೆಂದು ಅದು ಎಷ್ಟು ಉತ್ಸಾಹ ಗಂಡ ಹೆಂಡರಿಗೆ? ಎಷ್ಟು ಹಬ್ಬಹುಣ್ಣಿವೆ ಪೂಜೆ-ಪುನಸ್ಕಾರಗಳನ್ನು ಮಾಡಿದರೂ ತೀರದ.! ಅಂದು ತಾನು ಕೂಳಿನ ಪರಿವೆಯಿಲ್ಲದೆ ರಣರಣ ಬಿಸಿಲಲ್ಲಿ ಕೊಪ್ಪಳದವರೆಗೆ ನಡೆದುಹೋಗಿ ಹುಡುಗನಿಗಾಗಿ ಕಾಲಕಡಗ ತಂದು ಅವಳ ಕೈಯಲ್ಲಿಟ್ಟಾಗ ಅದು ಎಂಥ ಕಳೆ ಮೂಡಿಬಂದಿತ್ತು ಅವಳ ಮುಖದಮೇಲೆ? ಆನಂದೋತ್ಸಾಹದಲ್ಲಿ ಆಕೆಯ ಕಣ್ಣಲ್ಲಿ ನೀರು ಬಂದಿದ್ದವು. ಅವನ್ನು ತನ್ನ ಶೆಲ್ಲೆಯ ಚುಂಗಿನಿಂದ ಒರೆಸಿದಾಗ ಎಂತ ಹುಸಿಕೋಪ ತೋರಿಸಿದ್ದಳಾಕೆ?

ಇವೆಲ್ಲ ಚಿತ್ರಗಳು ನೆನಪಿಗೆ ಬಂದಂತೆ ಮರಿಯಪ್ಪನ ಕಣ್ಣಲ್ಲಿಯೂ ನೀರು ಬಂದವು. ಕಲ್ಲಮ್ಮ ಹುಡುಗನನ್ನು ಎತ್ತಿಕೊಂಡು "ಲೊಟ್-ಲೊಟ್" ಎಂದು ಬೆಲ್ಲ ಕೊಡುವ ಚಿತ್ರ ಅವನ ಕಣ್ಣಮುಂದೆ ಕಟ್ಟಿತು. ಏನು ಆಕೆಯ ರೂಪ! "ನಮ್ಮ ಜಾತಿಯಲ್ಲಿ ಹುಟ್ಟತಕ್ಕ ಹೆಣ್ಣೇ ಅಲ್ಲ" ಎಂದುಕೊಂಡ ಮರಿಯಪ್ಪ. "ಕೈ-ತೊಳೆದುಕೊಂಡು ಮುಟ್ಟಬೇಕು!" ಆಕಿನ್ನ ಉದೇ ಹಾಯವರೊಳಗs ಎದ್ದು ಮನೆಯೆಲ್ಲ ಕನ್ನಡಿಯ ಹಾಗೆ ಝುಳಝುಳ ಮಾಡಿ, ಮತ್ತೆ ಗಂಜಿ ಬೇಯಿಸಿದ ಮೇಲೆಯೇ ನನ್ನನ್ನು ಎಬ್ಬಿಸಬೇಕು. ನಾನು ಗಂಜೀಕುಡಿದು ಚಾವಡಿಗೆ ಹೋಗುತ್ಲೆ ಅವಳೂ ಹೋಗಬೇಕು ಹೊಲಕ್ಕೆ, ಹುಲ್ಲು ಕೊಯ್ಯಲು. ಮತ್ತೆ ನಾನು ಮನೆಗೆ ಬರುವವರೊಳಗಾಗಿ, ಅಡಿಗೆ ಮಾಡುವದನ್ನೆಲ್ಲ ಮುಗಿಸಿಕೊಂಡು ಬಾಗಿಲಮುಂದೆ ಕುಳಿತರೆ ರತಿಕಂಡಹಾಗೆ ಕಾಣಿಸಬೇಕು"

ಅಂದು ಶಿರಹಟ್ಟಿ ಜಾತ್ರೆಗೆ ಹೋದದ್ದು ಅವನ ಕಣ್ಣಮುಂದೆ ಬಂದಿತು. "ತಾನು ಹುಡುಗನನ್ನು ಹೆಗಲಮೇಲೆ ಕೂಡ್ರಿಸಿಕೊಂಡು ಮುಂದೆ ಮುಂದೆ ಹೊರಟಿದ್ದಾನೆ. ಆಕೆ ರೊಟ್ಟಿ ಬುತ್ತಿ, ಹಾಸಿಗೆಗಂಟು ಎಲ್ಲ ಹೊತ್ತುಕೊಂಡು ಸಾವಕಾಶ ಹಿಂದೆ ಬರಹತ್ತಿದ್ದಾಳೆ. ದಣಿದು ಹೆಣವಾಗಿದ್ದಾಳೆ. ಆದರೆ ತಾನಾಗಿಯೇ "ಸೋತೆ" ಎನ್ನುವದು ಆಕೆಯಿಂದ ಸಾಧ್ಯವಿಲ್ಲ. ಸಾಯುವ ಮುಂದೂ ಹೀಗೆ ಮಾಡಿದಳು. ಏಳೆಂಟು ದಿನ ಸಣ್ಣಾಗಿ ಜ್ವರ ಬಂದರೆ ಅದರ ಸುದ್ದಿ ಹತ್ತಗೊಟ್ಟಿದ್ದಿಲ್ಲ ನನಗೆ. ಎಂದು ಜೋರಾಗಿ ಹಾಸಿಗೆ ಹಿಡಿದಳೋ ಅಂದೇ ಗೊತ್ತಾದದ್ದು. ಊರುತುಂಬೆಲ್ಲಾ ಮಾರಿಕಾ. ಮುನಿಸ್ವಾಮಿಗೆ ಎರಡು ಕೋಳಿ ಬಿಡತೇನೆಂದು ಬೇಡಿಕೊಂಡೆ. ಆದರೆ ದೇವರ ಮನಸ್ಸಿಗೆ ಬರಲಿಲ್ಲ, ಆಕೆ ಜೀವಂತ ಇರುವದು. ಆಗ ಹುಡುಗ ಇನ್ನೂ ನಾಲ್ಕು ವರ್ಷದವ. ಸತ್ತು ಹೆಣವಾಗಿ ಆಕೆ ಹೊರಸಿನಮೇಲೆ ಬಿದ್ದಿದ್ದಾಳೆ. ಎಷ್ಟು ಬೇಡವೆಂದರೂ ಕೇಳದೆ ಹುಡುಗ ಆಕೆಯ ಮೇಲೆ ಬಿದ್ದಿದೆ."

"ನಾಲ್ಕು ಜನರು ಹೆಣವನ್ನು ಎತ್ತಹತ್ತಿದ್ದಾರೆ. ಹುಡುಗ ಬಂದು ನನ್ನ ಕೈ ಜಗ್ಗಹತ್ತಿದೆ ಅಳುತ್ತಾ, "ಎಪ್ಪಾ-ಅವ್ವನ್ನ ಇವರ್ಯಾಕ ಹೊತಕೊಂಡ ಹೊಂಟಾರು? ಅವ್ವ ಯಾಕ ಮಕ್ಕೊಂಡಾಳು? ಆಕಿನ ಎಬಸು. ನನ್ನ ಹೊಟ್ಟಿ ಹಸದೈತಿ" ಎಂದು ರಂಭಾಟ ಹಿಡಿಸಿದೆ.

ಎಲ್ಲವೂ ಕಣ್ಣಮುಂದೆ ಬಂದು ನಿಂತಿತು. ಮರಿಯಪ್ಪನ ಕಣ್ಣಿನಿಂದ ನೀರು ಬಳಬಳ ಇಳಿಯಹತ್ತಿವೆ. ಹಾಗೇ ಕೂತಿದ್ದಾನೆ ಪರಿವೆ ಇಲ್ಲದೆ ಪಿಳಿಪಿಳಿ ಕಣ್ಣು ಬಿಡುತ್ತಾ.

ಬಿಸಿಲಿನ ಕಾವು ಹೆಚ್ಚಿತು. ಕಣ್ಣೀರಿನಿಂದ ತೊಯ್ದ ಮರಿಯಪ್ಪನ ಗಲ್ಲುಗಳು ಚುರುಚುರು ಉರಿಯಹತ್ತಿದವು. ಆಗ ಎಚ್ಚರಾಯಿತು ಮರಿಯಪ್ಪನಿಗೆ. ಒಂದು ನಿಡಿದಾದ ಉಸಿರುಬಿಟ್ಟು ಎದ್ದು ಒಳಗೆ ಹೋದ.

"ದುರ್ಗ್ಯಾ-ಲೇ ದುರ್ಗ್ಯಾ-ಏಳಲೆ ನಾಕತಾಸ-ಹೊತ್ತೇರೇತಿ. ಗೌಡರು ಚಾವಡಿಗೆ ಬಂದಾರ ಕಾಣಸ್ತೈತಿ. ಅಟು ಚಾವಡಿಮಟಾನರ ಹೋಗಿಬರತೇನಿ" ಎಂದ ಮರಿಯಪ್ಪ ದುರ್ಗ್ಯಾ ಹೊತ್ತ ಕೌದಿಯನ್ನು ಜಗ್ಗುತ್ತ.

"ಹುಂ" ಎನುತ್ತ ದುರ್ಗ್ಯಾ ಮತ್ತೊಂದು ಮಗ್ಗುಲಿಗೆ ಹೊರಳಿ ಮಲಗಿಕೊಂಡ.

"ಏಳೋ ಮಾರಾಯಾ! ಅಪ್ಪಟು ಚಾಕರೀ ಮಾಡತೇನಂತ್ಹೇಳಿ ಇನ್ನೂ ಒಂದ ತುತ್ತು ಕೂಳರs ಕಾಣತೇವಿ. ಇಲ್ಲಿಕಂದರ ಹೋಗತಿದ್ವಿ ಹಂಗ ಹೊಲ್ಯಾರುಂಡ ಹಂಚಿನಂಗ'' ಎಂದ ಸಿಟ್ಟಿನಿಂದ ಮರಿಯಪ್ಪ.

ದುರ್ಗಪ್ಪ ಎದ್ದು ಕುಳಿತ. ರಾತ್ರಿಎಲ್ಲ ನಿದ್ದೆ ಇಲ್ಲದ್ದರಿಂದ ಕಣ್ಣು ಕೆಂಪಾಗಿವೆ. ಇಪ್ಪತ್ನಾಲ್ಕು ವರುಷ ಹರೆಯದವನಾದರೂ ಆಗಲೇ ಮುದುಕನಂತೆ ಮುಖದಮೇಲೆ ಗೆರೆಗಳು ಬಿದ್ದಿವೆ. ಎಣ್ಣೆಕಾಣದ ತಲೆಯ ಮೇಲಿನ ಕೂದಲುಗಳು, ಚಪ್ಪರದಮೇಲೆ ಹೊಚ್ಚಿದ ಹುಲ್ಲಿನಂತೆ ಬಂದು ಹಣೆಯ ಮೇಲೆ ಬಿದ್ದಿವೆ. ನೀಳವಾದ ಹುಬ್ಬಿನಮೇಲೆ ಹಲುಸಾಗಿ ಕೂದಲು ಬೆಳೆದು ಅತೀದಪ್ಪ ಕಾಣಿಸುತ್ತವೆ. ಜಡವಾದ ರಪ್ಪೆಗಳು ಅರ್ಧ ತೆರೆದಿವೆ. ನೀಟಾದ ಮೂಗಿನಮೇಲೆ ಜೋಳದ ಕಾಳು ಇಟ್ಟಹಾಗೆ ಒಂದು ನೆರಲೆ ಎದ್ದಿದೆ. ಮೂಗಿನಿಂದ ಬರುವ ಬಿಸಿಯುಸಿರು ಮೀಸೆಯಲ್ಲಿ ಹಾಯ್ದು ಹೋಗುವಾಗ "ಬುಶ್" ಎಂದು ಸಪ್ಪಳವಾಗುತ್ತದೆ. ಎಲೆ ಅಡಿಕೆ ಮೆದ್ದುಮೆದ್ದು ಹಲ್ಲಿನ ಮೇಲೆ ಹಂಸಗಟ್ಟಿದೆ. ಹರುಕುಹರುಕಾದ ಅಂಗಿಯು ಕರಿಯ ದೇಹವನ್ನರ್ಧ ಮುಚ್ಚಿದೆ. ನಿದ್ದೆಗಣ್ಣಿನಲ್ಲಿಯೇ ಇದ್ದಾನೆ ದುರ್ಗಪ್ಪ.

ದುರ್ಗಪ್ಪ ಎದ್ದು ಹಾಸಿಗೆಯಮೇಲೆ ಕುಳಿತುಕೊಂಡೇ, ಕ್ಷಣಹೊತ್ತು ತನ್ನ ತಂದೆಯನ್ನು ದಿಟ್ಟಿಸಿ ನೋಡಿದ. ಮಗನ ಮುಖದಮೇಲಿನ ಈ ನಿರ್ಜೀವ ಕಳೆಯನ್ನು ಕಂಡು ತಂದೆಯ ಹೊಟ್ಟೆಯಲ್ಲಿ ಕಸಿವಿಸಿಯಾಯಿತು.

"ಏಳು-ಮೋತಿಗೆ ಅಟು ನೀರ ಹಾಕೋ ಏಳ. ಒಲಿಮ್ಯಾಲೆ ಬಿಸಿಗೆಂಜೀ ಇಟ್ಟೇನಿ. ಕುಡುದು ಮನ್ಯಾಗ ಇರು. ಮತ್ತೆಲ್ಲಿಗೂ ಹೋಗಬ್ಯಾಡ. ನಾ ಅಟು ಚಾವಡೀಮಟಾ ಹೋಗಿಬರತೇನಿ" ಎಂದ ಮರಿಯಪ್ಪ ಮಗನ ಹೆಗಲು ಅಲ್ಲಾಡಿಸುತ್ತಾ.

ಮರಿಯಪ್ಪ ಹೆಗಲಮೇಲೆ ಕಂಬಳಿ ಹಾಕಿಕೊಂಡು ಚಾವಡಿಗೆ ಹೊರಡಲು ಸಿದ್ಧನಾದ. ದುರ್ಗಪ್ಪ ಏನೋ ಜ್ಞೇನಿಸಿಕೊಂಡವನಂತೆ "ಎಪ್ಪಾ?" ಎಂದ.

"ಏನು?'' ಎಂದು ಮರಿಯಪ್ಪ ಕೇಳಿದ.

"ನೀ ಚಾವಡಿಗೆ ಹೋದವನ ಗೌಡರಿಗೆ ಸಲಾಮು ಹಾಕತೀಯಲ್ಲ?"

"ಹೌದು. ಹಾಕಾಕಬೇಕು."

"ಇನ್ನ ಮ್ಯಾಲಿಂದ ಅವರಿಗೆ ಸಲಾಮ್ ಹಾಕಬ್ಯಾಡ"

"ಹಂಗಂದರ ಹ್ಯಾಂಗಪಾ-ಅವರು ಎಷ್ಟೋ ವಾಡಿದರೂ ಗೌಡರು!"

"ಗೌಡ ಯಾರಾಗಂದರ ಅವಗ?"

ತನ್ನ ಮಗನ ಪ್ರಶ್ನೆಯನ್ನು ಕೇಳಿ ಮರಿಯಪ್ಪನಿಗೆ ನಗೆ ಬಂದಿತು. ತನ್ನ ಮಗ ಇನ್ನೂ ಸಣ್ಣವ. ಬುದ್ಧಿ ಸಾಲುವದಿಲ್ಲ. ಅದಕ್ಕೆ ಇಂಥ ಪ್ರಶ್ನೆ ಕೇಳುತ್ತಾನೆಂದು ತಿಳಿದು "ಏನ ಹುಚ್ಚ ಹುಡುಗನಪಾ ನೀನು? ಇಟೂ ತಿಳಿ ಯಲ್ಲ?" ಎಂದ ನಗುತ್ತಾ.

"ಅವರೂ ಮನಸ್ಯಾರು, ನಾವೂ ಮನಸ್ಯಾರ! ಹೌದಲ್ಲೋ?" ಎಂದು ಕೇಳಿದ ದುರ್ಗಪ್ಪ ತನ್ನ ತಂದೆಗೆ.

"ಮನಸ್ಯಾರಾದರೇನಾತು? ಮ್ಯಾಗ ಹರಿಯೂ ನೀರು ಮ್ಯಾಗ ಹರೀ ಬೇಕು, ಕೆಳಗ ಹರಿಯೂ ನೀರು ಕೆಳಗ ಹರೀಬೇಕು. ಏನೋ ಹಿಂದಿನ ಜನ್ಮದಾಗ ಕರ್ಮಾ ಮಾಡೇವಂತ್ಹೇಳಿ ಈ ಕುಲದಾಗ ಹುಟ್ಟೇವಿ. ಮತ್ತ ಈಗಟು ಪಾಪಮಾಡಿ ನರಕಕ್ಕ ಹೋಗೂದೈತೇ?" ಎಂದ ಮರಿಯಪ್ಪ, ತಿಳಿಸಿ ಹೇಳುವ ಧ್ವನಿಯಲ್ಲಿ.

ತನ್ನ ತಂದೆಯ ಕೂಡ ವಾದಿಸಿ ಅವನ ಮನಸ್ಸು ಬದಲಿಸುವದು ಸಾಧ್ಯವಿಲ್ಲವೆಂದು ದುರ್ಗಪ್ಪನಿಗೆ ಗೊತ್ತಿದ್ದಿತು. ಮರಿಯಪ್ಪನೂ ಹೆಚ್ಚು ಮಾತು ಬೆಳೆಸದೆ,

"ಮನ್ಯಾಗಇರು-ನಾ ಹೋಗಿ ಬರೂಮುಟ" ಎಂದು ಹೇಳಿ ಹೊರಟು ಹೋದ.

ಮರಿಯಪ್ಪ ಚಾವಡಿಗೆ ಬರುವದರೊಳಗಾಗಿ ಗೌಡರು ಬಂದಿದ್ದರು. ಮರಿಯಪ್ಪ ಗೌಡರ ಮುಂದೆ ನಿಂತುಕೊಂಡು,

"ನಮಸ್ಕಾರ್ರೀ ಎಪ್ಪಾ" ಎಂದು ಶರಣು ಹಾಕಿದ.

"ಎಷ್ಟೊತ್ತಲೇ ಮರ್‍ಯಾ ಬರೂದು ಚಾವಡಿಗೆ?" ಎಂದರು ಗೌಡರು ಕೂತಲ್ಲಿಂದ.

ಗೌಡರಿಗೂ ಏನೂ ಕೆಲಸವಿದ್ದಿಲ್ಲ. ಚಾವಡಿಗೆ ಬಂದು ತಾಸು ಹೊತ್ತಾದರೂ ಇನ್ನೂ ದಫ್ತರ ಗಂಟು ಬಿಚ್ಚಿದ್ದಿಲ್ಲ. ಹಾಗೆಯೇ ಚಾವಡಿ ಕಟ್ಟೆಗೆ ಕೂತಿದ್ದರು ತಂಬಾಕ ಅಗಿಯುತ್ತ.

ಮರಿಯಪ್ಪನೂ ಇತ್ತ ಕಡೆಗೆ ಕೆಳಗೆ ಕಂಬಳಿ ಚೆಲ್ಲಿ ಅದರ ಮೇಲೆ ಕುಳಿತುಕೊಂಡ "ಉಶ್ಯಪ್ಪಾ ದೇವರ'' ಎನ್ನುತ್ತಾ.

ಹಾಗೇ ಇಬ್ಬರೂ ಎಷ್ಟೋ ಹೊತ್ತು ಮಾತಾಡದೇ ಕುಳಿತುಕೊಂಡಿದ್ದರು. ಮರಿಯಪ್ಪನೇ ಮೌನ ಮುರಿದ.

"ಏಪ್ಪಾ?'' ಎಂದ ಗೌಡರಿಗೆ.

"ಯಾಕೋ ಮರಿಯಾ?'' ಎಂದರು ಗೌಡರು.

"ಅಟು ತಂಬಾಕ ಚೆಲ್ಲರಿ''

ಗೌಡರು ಚಂಚಿ ಬಿಚ್ಚಿ ಸ್ವಲ್ಪ ತಂಬಾಕಾ ಮುರಿದು ಮರಿಯಪ್ಪನ ಕೈಯಲ್ಲಿ ಹಾಕಿದರು. ಮತ್ತೆ ಹಾಗೇ ಸ್ವಲ್ಪ ಹೊತ್ತು ಹೋಯಿತು.

"ಮರಿಯಾ?'' ಎಂದರು ಗೌಡರು ಏನೋ ನೆನಪು ಮಾಡಿಕೊಂಡವರಂತೆ.

"ಏನರಿ ಎಪ್ಪಾ?"

"ಎಂಥೆಂಥಾ ಕಾಲ ಬಂದುವೋ ಮರಿಯಾ? ನಮ್ಮ ಕಣ್ಲೆ ಕಾಣಬಾರದ್ದನ್ನ ಕಾಣಾಕ ಹತ್ತೇವಿ!''

"ಹೌದರೀ ಧನ್ಯಾರ. ಕಲೀ ಕಾಲಾನs ತಿರಗ್ಯಾವು. ಏನು ಹುಚ್ಚೋ ಏನೋ ಈಗಿನ ಹುಡುಗರಿಗೆ. ಒಂದ ಹಿರ್ಯಾರಂತಾರ-ಒಂದ ಕಿರ್ಯಾರಂತಾರ-ಒಂದ ಮೇಲಜಾತಿಯುವರಂತಾರ-ಒಂದ ಕೀಳಜಾತಿಯುವರಂತಾರ. ತಾವಂವರ ದೊಡ್ಡ ಶಾಣ್ಯಾರಂತ್ಹೇಳಿ ತಿಳಕೊಂಡಾರ. ಹಿರ್ಯಾರ ಮಾತಂದರ ದರಕಾರನ ಇಲ್ಲ ಅವರಿಗೆ'' ಎಂದು ತನ್ನ ಮಗನ ವಿಷಯವನ್ನೇ ಹೇಳಹತ್ತಿದ.

ಗೌಡರು ಅವನನ್ನು ನಡುವೆ ತಡೆದು "ಅಲ್ಲಾ-ಮಾಗೇರಿಗೌಡ ಇದ್ದಿದ್ದಿಲ್ಲ?-ನಮ್ಮ ಬೀಗ ಆಗಬೇಕಲ್ಲೋ?''

"ಹೌದೇಳರಿ-ಮೊನ್ನೆ ಮೊನ್ನೆ ಚಿಕ್ಕ ಧನ್ಯಾರ ಜವಳಾ ತಗಿಯೂ ಮುಂದ ಬಂದಿದ್ದರು?''

"ಹೂ-ಹು ಅವರs ನೋಡು. ಮೊನ್ನೆ ಮುಸಲ್ಮಾನರು ಮನೀ ಹೊಕ್ಕು ಎಲ್ಲಾ ಲೂಟಿಮಾಡಿಕೊಂಡು ಹೋದರಂತ. ಮತ್ತ ಇಷ್ಟಕ್ಕ ಬಿಟ್ಟಿಲ್ಲ

ಅವರ್ನ? ತಾವs ದಪ್ತರೆಲ್ಲಾ ತಗೊಂಡಹೋಗಿ. "ಇವಕಾಂಗ್ರೆಸ್ಸಿನವ, ದಪ್ತರೆಲ್ಲಾ ಕಾಂಗ್ರೆಸ್ಸಿನವರಿಗೆ ಕೊಟ್ಟಾನು'' ಅಂತ್ಹೇಳಿ ಹೂಲಿ ಹಬ್ಬಿಸಿ, ಪೋಲಿಸರು ಬಂದ ಗೌಡರ್ನ ಹಿಡಕೊಂಡ ಹೋಗುಹಂಗ ಮಾಡಿದರಂತ. ಈಗ ಅವರ್ನ ಜೇಲಿಗೆ ಹಾಕ್ಯಾರ. ಅವರ ಮನೀ ಹೆಣಮಕ್ಕಳ ಗೋಳು ಹೇಳೂಹಂಗಿಲ್ಲ! ಅಲ್ಲಾ?–ಏನಮಾಡೂದೈತಿ ಹಿಂಗಾದರs ಅಂತೇನ್ರಾ?"

"ಏನ ಮಾಡುದೈತರಿ ಎಪ್ಪಾ? ದೇವರs ಕಾಯ್ಬೇಕು ಅವರ್ನ!'' ಎಂದ ಮರಿಯಪ್ಪ ಮರಮರ ಮರಗುತ್ತ.

ಮರಿಯಪ್ಪನ ಮಾತಿನಿಂದ ಗೌಡರಿಗೆ ಸ್ವಲ್ಪ ನಿರಾಶೆಯಾಯಿತು. ಆದರೂ ಅದನ್ನು ತೋರಿಸಿಕೊಡದೆ, ಜಂಚಿ ಬಿಚ್ಚಿ, ಮರಿಯಪ್ಪ ಕೇಳದೆ ಇದ್ದರೂ ಕೂಡಾ, ಎಲೆ ಅಡಿಕೆ ಸ್ವಲ್ಪ ತಂಬಾಕನ್ನು ಎತ್ತರಿಸಿ ಅವನ ಕೈಯಲ್ಲಿ ಹಾಕಿ ತಾವೂ ಎರಡು ಹೋಳು ಅಡಿಕೆ ಬಾಯಲ್ಲಿ ಒಗೆದುಕೊಂಡರು. ಗೌಡರು ಸ್ವತಃ ಎಲೆ ಅಡಿಕೆ ಕೊಡುತ್ತಲೇ ಮರಿಯಪ್ಪ ಖುಶಿಯಾಗಿ ಎದ್ದು ಕುಳಿತು, ಅಲ್ಲೇ ಬಿದ್ದ ಒಂದು ಕಲ್ಲುತೆಗೆದುಕೊಂಡು ಎಲೆ ಅಡಿಕೆ ಜಜ್ಜ ಹತ್ತಿದ.

ತಂಬಾಕನ್ನು ಉಗುಳಿ "ಮರ್ಯಾ?'' ಎಂದರು ಗೌಡರು.

"ಯಾಕರಿ ಎಪ್ಪ?'' ಎಂದ ಮರಿಯಪ್ಪ ತನ್ನ ಬಚ್ಚಬಾಯ ಇಷ್ಟಗಲಮಾಡಿ.

"ನಿನ್ನ ಮಗ ಎಲ್ಲೆ ಕೆಲಸಕ್ಕ ಹೋಗ್ತಾನೋ ಈಗ?"

"ಎನ ಸುಡತೀರಿ ಅವನ ಬಾಳೇತಗೊಂಡ? ನಿಮ್ಮ ಮನಿ ಚಾಕರಿ ಬಿಟ್ಟಾನ ಸುಟ್ಟೊ ಒಂದ ದಗದಿಲ್ಲ, ಒಂದ ಕಾಸಿನ ಹುಟ್ಟೋಜಿಲ್ಲ. ಅವರ ಇವರ ಕಾಲಬಿದ್ದ ನಾ ಅಟು ಏನರ ತರತೇನೆ? ತಿಂದ ಅಡ್ಡ್ಯಾಡತಾನ ಹಂಗ ಕೊಮು–ರಾಮು ನಂಗ!'' ಎಂದ ಮರಿಯಪ್ಪ ದುಃಖ ಪ್ರದರ್ಶಿಸುತ್ತ.

"ಹಿಂಗ ಮಾಡಿದರ ಹ್ಯಾಂಗ ನಡೀಬೇಕೋ ಮನೆತನ? ಇಂದ್ಹೋ ನಾಳ್ಹೋ ಗೋರಿಗ್ಹೋಗುವಂಗಾದಿ ನೀನು. ಇನ್ನೂ ನೀನs ದುಡಿಬೇಕಂದರೆಲ್ಲಿ ಮಾತಿದು?'' ಎಂದರು ಗೌಡರು ಕಳಕಳಿಯಿಂದ.

"ಏನ ಮಾಡುದೈತರಿ. ಇರಾವೊಬ್ಬವ ಮಗಾ ಅಂತ್ಹೇಳಿ ಸಲಿಗಿ ಕೊಟ್ಟಿದ್ದರ ಪರಿತಾಪ ಇದು."

" ಅಲ್ಲ್ಯಾ--ಇನ್ನ ನಿನ್ನ ಮಗ್ಗ ನಿನ್ನ ಚಾಕರಿ ಒಪ್ಪಿಸಿ ಬಿಡಬೇಕು.?"

" ನಾ ಒಲ್ಲ್ಯೈ ಅಂತ್ಹೇಳಿ ಸ್ಪಷ್ಟ್ಯಾಗಿ ಹೇಳತಾನರೀ?"

" ಛೇ ತಗೀ--ಇದೇನ ಬರೋಬರಿ ಅಲ್ಲಸಾ ! "

" ಏನ ಮಾಡೊದ್ಯೈತರಿ ! ಮೊದಲನೇ ಮಾತು ನನ್ನ ನಸೀಬ ಕೆಟ್ಟೈತಿ ! ಆ ಮಾರಾಯತಿ ಎಂದ ಮನೀಬಿಟ್ಟು ಹೋದ್ಲು ಅಂದಿನಿಂದ ಕೆಡಗಾಲ ಸುರುವಾಗೇತಿ ನನ್ನ ಮನಿಗೆ " ಎಂದ ಮುತ್ತಪ್ಪ ದುಃಖದಿಂದ.

" ಪುಣ್ಯಾ ಬೇಕಸಾ ಅದುಕ್ಕೂ, ಛಲೀ ಹೇಂತಗ ಇರಬೇಕಂದರ?"

" ಏನ ಮಾಡತೀರೆಪ್ಪಾ ನನ್ನ ಕರ್ಮ ತೊಗೊಂಡು. ರೈತರ ಮನೀಗ್ಹೋದರ "ನಮಗss ತಿನ್ನಾಕ ಜ್ವಾಳಿಲ್ಲ, ನಿಂಗೆಲ್ಲಿಂದ ಕೊಡೂಣು" ಅಂತಾರ. ಮನ್ಯಾಗ ನೋಡಿದರ ಮುಕ್ಕ ಜ್ವಾಳಿಲ್ಲ. ಇದ್ದಟು ಹಿಟ್ಟು, ಮುಂಜೇಲಿ ಸಂಗಟಿ ತಿರುವಿಟ್ಟ ಬಂದಿದ್ದೆ. ಇನ್ನ ಚಂಜೀಕಡಿಸೆ ಹ್ಯಾಂಗಮಾಡೂದ ಅಂತ ಯಾಚನಾ ಮಾಡಕಹತ್ತೀನಿ "

" ಚು-ಚು-ಚು-ಚು. ಹಿಂಗೇನಂಗರ. ನಮ್ಮನಿಗೆ ಬಂದ ಇಸಗೊಂಡ್ಹೋಗವಷ್ಟ ಜ್ವಾಳಾನ. ನೀನ ಬೇಡುದುಲ್ಲ–ಮನೀಕಡೆ ಬರೂದ ಬಿಟ್ಟೇದಿ?"

" ಯಾ ಮೋತಿಲಿಂದ ಬರಲಿರಿ ನಾ? ಪುಚ್ಚ ಹುಡುಗ ಅಪ್ಪೊಬ್ಬನ ಕೆಲಸಾ ಬಿಟ್ಟ ಬಿಟ್ಟ?!" ಎಂದ ಮರಿಯಪ್ಪ.

" ಅದಕಾಗೇನೈತಿ ಬಾರೋ ನಿನ. " ಎಂದು ಗೌಡರು ಸಮಾಧಾನ ಹೇಳಿದರು.

ಮರಿಯಪ್ಪನಿಗೆ ಗೌಡರಮಾತಿನಿಂದ ಹಿಡಿಸಲಾರದಷ್ಟು ಆನಂದವಾಯಿತು. ಅದೇ ಆನಂದದಲ್ಲಿಯೇ ಮನೆಗೆಬಂದು ಮುಟ್ಟಿದ.

ಮನೆಯ ಹೊಸ್ತಿಲದೊಳಗೆ ಕಾಲಿಡುತ್ತಲೆ ಮರಿಯಪ್ಪನಿಗೆ ಹುಚ್ಚೇ ಹಿಡಿದ ಹಾಗಾಯಿತು. ದುರ್ಗಪ್ಪ ತನ್ನ ಮುಂದೆ ಕಾಗದ ಸುರುಳಿಸುರುಳಿಗಳನ್ನೇ ಹರಿವಿಕೊಂಡು ಕೂತಿದ್ದಾನೆ. ಏನೇನೋ ಓದುತ್ತಾನೆ--ಅದರಲ್ಲಿ ಬರೆದಂತೆ ತಾನೂ ಬರೆಯುತ್ತಾನೆ--ತನ್ನ ಎದುರಿಗೆ ಯಾರೋ ಕೈಜೋಡಿಸಿ ಕುಳಿತುಕೊಂಡಿದ್ದಾರೋ ಏನೊ ಎಂದು ತಿಳಿದು ಪಾವತಿ ಬರೆದು ಒಳ್ಳೇ ಬಿಗುವಿನಿಂದ ಅವರ ಕೈಯಲ್ಲಿ ಕೊಟ್ಟಂತೆ ಮಾಡುತ್ತಾನೆ. ಎಷ್ಟೋ ಸರಕಾರೀ ಕಾಗದ ಪತ್ರಗಳೇ ಅವೆ ಅಲ್ಲಿ. ಮಗನನ್ನು ಕಂಡು ಮರಿಯಪ್ಪನಿಗ

ಏನೂ ತಿಳಿಯದಾಯಿತು. ತನ್ನ ಮಗನಿಗೆ ಹುಚ್ಚುಗಿಚ್ಚು ಹಿಡಿದಿರ ಬಹುದೇ ? ಎಂದು ಕಲ್ಪನೆಬಂದಿತು. ಆ ಕಲ್ಪನೆಯು ಕೂಡ ಅವನ ದೇಹವೂ ನಡುಗಿತು

" ದುರ್ಗ್ಯಾ? " ಅಂದ ಮರಿಯಪ್ಪ, ದುಃಖಮಿಶ್ರಿತ ಆಶ್ಚರ್ಯದ ಧ್ವನಿಯಲ್ಲಿ.

" ಓ ? " ಎಂದ ದುರ್ಗಪ್ಪ ನಗುತ್ತಾ.

" ಇದೇನ್ನಡಿಸಿಲೇ ಕಂತ್ರಾಟಾ ? ಇವೆಲ್ಲಿವು ಕಾಗದ ಪತ್ರ ? ಸರಕಾರಿ ಕಾಗದದಂಗ ಕಾಣಸ್ತಾವಲ್ಲಾ ? ಹುಚ್ಚುಗಿಚ್ಚು ಹಿಡದೈತೇನ್ನಿನಗ ? "

" ಕಾಗದ ಪತ್ರ ಹ್ಯಾಂಗಬರಿಯೂದು ಅನ್ನೂದನ್ನ ನೋಡಿಕೊಳ್ಳಾಕ ಹತ್ತೀನಿ. ನಾಳೆ ಗೌಡಾಗವ ಅದೇನಿ ಈ ಊರಿಂದು. ಮತ್ತ ಅದಕ್ಕ ಗೊತ್ತಿರಬ್ಯಾಡ ಅದರ ಹಾಲಚಾಲ ? " ಎಂದ ದುರ್ಗಪ್ಪ ಮತ್ತಷ್ಟು ನಗುತ್ತಾ.

ಈಗ ಮಾತ್ರ ನಿಜವಾಗಿಯೂ ತನ್ನ ಮಗನಿಗೆ ಹುಚ್ಚೇ ಹಿಡಿದಿದೆ ಎಂದು, ಖಾತ್ರಿಯಾಯಿತು ಮರಿಯಪ್ಪನಿಗೆ. " ಇದ್ದೊಬ್ಬ ತನ್ನ ಮಗ ನನ್ನು ದೇವರು ಹೀಗೆ ಮಾಡಿದನಲ್ಲಾ ! " ಎಂದು ದುಃಖವೂ ಬಂದಿತು. ಜೋರಾಗಿ ಅಳುತ್ತಾ ತನ್ನ ಮಗನನ್ನು ಅಪ್ಪಿಕೊಂಡು ಅವನ ತಲೆಸವ ರುತ್ತ ಮಾತಾಡಹತ್ತಿದ.

" ಬ್ಯಾಡಪಾ ನಮಗ ಇಂಥಾ ವ್ಯಾರಿ. ಯಾರ ತಲಿ ತಿಕ್ಕಿದರು ನಿಂದು ? " ಎಂದ ಮರಿಯಪ್ಪ ಬಿಕ್ಕುತ್ತಾ.

ತನ್ನ ತಂದೆ ಅಳುತ್ತಿರುವದನ್ನು ಕಂಡು ದುರ್ಗಪ್ಪ ನಗುವನ್ನು ನಿಲ್ಲಿಸಿದ. ಮತ್ತು ಅವನನ್ನು ಸಮಾಧಾನಪಡಿಸುವ ಧ್ವನಿಯಲ್ಲಿ

" ನೀ ಹಿಂಗ ಯಾಕ ಅಳತೀಪಾ ? ನಂಗ್ಯಾರವರು ತಲಿತಿಕ್ಕವರು? ನಂಗ ಹುಚ್ಚಹಿಡದೈತೆಂತ ಯಾರ ಹೇಳಿದರು ನಿನಗ ? "

" ಹಂಗರ ಗೌಡಾಗತೇನಿ--ಆದಾಗತೇನಿ ಅಂತ್ಹೇಳಿ ಹಿಂಗ್ಯಾಕ ಹುಚ್ಚುಚ್ಚಾಕಾರ ಮಾತಾಡತಿ ? "

" ಅದ್ಕ--ಅದನ ತಗೊಂಡೇನ ಮಾಡತಿ ? ಅಲ್ಲಾ ?- ನಿನ್ನ ಮಗ ಗೌಡಾದರ ನಿನಗ ಖುಶಿ ಆಗತೈತಿಲ್ಲೋ ? "

" ನನಗ ಹೆದರಿಕೆ ಆಗತ್ತೈತಿ. ಹಿಂದಕ ಯಾವ ಕರ್ಮಾ ಮಾಡೇವ್ರೋ ಏನೋ? ಈ ಜಾತ್ಯಾಗ ಹುಟ್ಟೇವಿ. ಮತ್ತ ಈಗೂ ಪಾಪಾ ಮಾಡಿದಿ ನೆಂದರ ಮತ್ತ ಇದs ಜಾತ್ಯಾಗ ಹುಟ್ಟತೇವಿ. ಈಗ ಛಲೋತಂಗ ನಡ ಕೊಂಡರ ಮುಂದಿನ ಜನ್ಮದಾಗ ನೀ ಗೌಡಾಗೇ ಹುಟ್ಟ ಬಹುದು "

" ಇದs ಜನ್ಮದಾಗ ಗೌಡಾಗಾಕ ಬರುದುಲ್ಲಸು ? "

" ಹಂಗ್ಯಾಂಗ ಬರತ್ತೈತಿ ? ಗೌಡಾಗಬೇಕಂದರ ಮ್ಯಾಲಿನ ಕುಲದವ ರಿರಬೇಕು. "

" ಹಂಗರ ನಡೀ--ಇವತ್ತ ಮ್ಯಾಲಿನ ಕುಲದವರಾಗೂನು "

" ಹಂಗಾಗಾಕ ಬರೂದುಲ್ಲ. ಮ್ಯಾಲಿನ ಕುಲದವರು ನಮ್ಮನ್ನ ತಮ್ಮ ಜಾತ್ಯಾಗ ತಗೋಳುದುಲ್ಲ "

" ಮ್ಯಾಲಿನ ಕುಲದವರಂದರ್ಯಾರು ? "

" ಲಿಂಗವಂತರು--ಬ್ರಾಂಬ್ರು ...."

" ಮುಸಲ್ಮಾನರು ತಗೊಂತಾರಲ್ಲ ತಮ್ಮ ಜಾತ್ಯಾಗ ? "

ಈಗ ಥಟ್ಟನೆ ಹೊಳೆಯಿತು ಮರಿಯಪ್ಪನಿಗೆ ತನ್ನ ಮಗ ಏನು ಮಾಡಲಿಚ್ಛಿಸಿರುವನೆಂಬುದು ! ಅದನ್ನು ನೆನಿಸಿಕೆಂಡಂತೆ ಮೈಮೇಲೆ ಮುಳ್ಳು ಬಂದವು. ಇವನ ಮಾತಿನಿಂದ ಮನೆಯ ದೇವತೆ ಎಲ್ಲಿ ಸಿಟ್ಟಿಗೇಳಬಹುದೋ ಎಂದು ಹೆದರಿಕೆಯೂ ಆಯಿತು.

" ಛೀ--ಹುಚ್ಚುಸೂ--ಮಗನ. ಏನ ಪುಣ್ಯಾ ಮಾಡಿದ್ಯೋ ಹಿಂದೂ ಮಂದ್ಯಾಗ ಹುಟ್ಟೇದಿ ! ನೀ ಅವರ ಜಾತಿಗೆ ಸೇರಿದರೂ ನಿನ್ನೇನ ಅವರು ಸರಿಕದವರಂಗ ನಡೆಸಿಕೊಂತಾರಂತ ತಿಳಕೊಂಡಿದೇನ ? ಹಮಾ ಇರೂಮಟಾ " ಎಪ್ಪಾ ಎಪ್ಪಾ" ಅಂತಾರ. ತಮ್ಮ ಕೆಲಸಾದಮ್ಯಾಲೆ ಒದ್ದ ಹಕಲಾಸ್ತಾರ ನಿನ್ನ ! ಇನ್ನೊಮ್ಮೆ ಇಂಥಾ ಮಾತ ಮಾತಾಡಿದರ ನನ್ನಿಂದ ಬಂತಂಹಿ-ಳಕೊ ? " ಎಂದು ಸಿಟ್ಟಿನಿಂದ ಎದ್ದು ಎಲ್ಲ ಕಾಗದ ಪತ್ರಗಳನ್ನು ಒಯ್ದು ಒಲೆಯಲ್ಲಿ ಹಾಕಿ ಸುಟ್ಟುಬಂದ ಮರಿಯಪ್ಪ.

" ಇಪ್ಪತ್ತೆಂಟು ಇಚಾರಮಾಡಿ ಸುಳ್ಳ ತೆಲಿಕೆಡಸಿಕೋ ಬ್ಯಾಡ. ಏನೂ ಕಲಸ ಇಲ್ಲದ ಸುಮ್ಮಕ ಕುಂತಿರತಿ ಮನಿಯಾಗ ಮತ್ತೇನ್ಮಾಡಿ? ಗೌಡರ ಕಾಲಿಗೆ ಬಿದ್ದು 'ನಿನ್ನ ಮತ್ತ ಕೆಲಸಕ ತಗೋರಿ, ಅಂತ ಬೇಡಿ

ಕೊಂತೇನಿ. ನಾ ಬಾಯಿ ಹಾಕಿದರ ‘ ಇಲ್ಲ ’ ಅನ್ನೊದಿಲ್ಲ ಆ ನಾರಾಯ.
ನಾಳಿಂದ ಮುನ್ನಡೆ ದುಡ್ಯಾಕ್ಹೋಗು. ನಾ ಅಟು ಗೌಡರ ಮನೀಗ್ಹೋಗಿ
ಜ್ವಾಳಾ ಇಸಗೊಂಡು ಬರತೇನಿ. ಇಲ್ಲೇ ಬಿದ್ದಿರು ಕಾಲ್ಮುರಕೊಂಡು ”
ಎನ್ನುತ್ತಾ ಗೌಡರ ಮನೆಗೆ ಹೊರಟ ಮರಿಯಪ್ಪ.

ಗೌಡರ ಮನೆಯ ಕಡೆಗೇನೋ ಕಾಲು ಸಾಗುತ್ತಿದ್ದವು. ಮನಸ್ಸು ಮಾತ್ರ ಎಲ್ಲಿ ಎಲ್ಲ್ಯೋ ಸುತ್ತುತ್ತಿತ್ತು. ತನ್ನ ಮಗಸಿಗೆ ಯಾರೋ ಹುಚ್ಚು ಹಿಡಿಸಿರಲಿಕ್ಕೇಬೇಕು! ಎಂದು ಅವನ ಮನಸ್ಸು ಹೇಳುತ್ತಿತ್ತು. “ ಏನಮಾಡಬೇಕಾದೀತಪ್ಪಾ ಇವನ ಕಾಲಾಗ ? ” ಎಂದು ವಿಚಾರ ಮಾಡುತ್ತ ಗೌಡರ ಮನೆಯ ಮುಂದೆ ಬಂದು ನಿಂತ.

“ ಎಪ್ಪಾ--ಧನ್ಯಾರ?” ಎಂದು ಕೂಗಿದ ಬಾಗಿಲಮುಂದೆ ನಿಂತುಕೊಂಡು.

ಅದೇ ಊಟಮಾಡಿ ಎಲೆ ಅಡಿಕೆ ತಿನ್ನುತ್ತಾ ಕುಳಿತ ಗೌಡರು ಎದ್ದು ಹೊರಗೆ ಬಂದರು. “ ಏನಪಾ ಮರಿಯ-ಜ್ವಾಳಕ್ಕ ಬಂದ್ಯಾ ?” ಎಂದರು ನಗುತ್ತ.

“ ಹುನರಿ--ಎಪ್ಪಾ. ಚಂಜಿನ್ಯಾಗ ತಿನ್ನಾಕ ಒಡಕ್ಯಾಳಿಲ್ಲ ಮನ್ಯಾಗ”

“ಅದಕೇನೈತಿ ತಗೊಂಡ ಹೋಗಲೇ” ಎಂದು ಗೌಡರು ಒಳಗೆ ಹೋಗಿ ಒಂದು ಚಿಟ್ಟಿ ಜೋಳದಿಂದ ತುಂಬಿದ ಬುಟ್ಟಿಯನ್ನು ತಂದು ಮರಿಯಪ್ಪನ ಕಂಬಳಿಯಲ್ಲಿ ಸುರುವಿದರು- ಹಾಗೆಯೇ ಸ್ವಲ್ಪ ಸಲಿಗೆಯಿಂದ ಅಂದರು ಗೌಡರು. “ ಮರ್ಯಾ - ಚಂಜಿನ್ಯಾಗ ಇತ್ಲಾಗ ಬಾ ಅಲ್ಲಾ? ಇಲ್ಲೆ ರೊಟ್ಟಿ ತಿಂದು ಭಾವಣ್ಯಾಗ ಮಕ್ಕೊವಂತೀ ? ”

ಮರಿಯಪ್ಪನಿಗೆ ಎದುರು ಮಾತಾಡುವ ರೂಢಿಯೇ ಇಲ್ಲ.

ಅಭ್ಯಾಸ ಬಲದಿಂದ “ ಹುನರಿ ” ಎಂದುಬಿಟ್ಟ. ಆಮೇಲೆ ವಿಚಾರ ಮಾಡಹತ್ತಿದ. “ನಾನು ಇತ್ಲಾಗ ಮಲಗಾಕ ಬಂದರ ಮತ್ತ ದುಗ್ಯಾ ಎತ್ಲಾಗ ಹೋಗತಾನೋ ಏನೋ? ಎತ್ಲಾಗರ ಹೋಗಿ ಏನರ ಮಾಡಿ ಕೊಂಡ ಬಂದರ ಏನ ಮಾಡುದೈತಿ?” ಎಂದು ಸಂಕಟ. ಇನ್ನು, ಅಧಿಕಾರ ದಲ್ಲಿರುವ ಗೌಡರಿಗೆ “ ಒಲ್ಲೆ ” ಎಂದು ಹೇಗೆ ಹೇಳುವದು ? ಹಾಗೆ ವಿಚಾರ ಮಾಡುತ್ತ ಮನೆಯ ಕಡೆಗೆ ಹೊರಟ.

ದುರ್ಗಪ್ಪ ತನ್ನ ತಂದೆಯ ಮಾತುಗಳನ್ನೇ ಮೆಲುಕು ಹಾಕುತ್ತ ಕುಳಿತುಕೊಂಡಿದ್ದ. "ತನ್ನ ತಂದೆ ತನ್ನನ್ನು ಎಷ್ಟು ಪ್ರೀತಿಸುವನಲ್ಲಾ!" ಎಂಬ ವಿಚಾರ ಬಂದಾಗ್ಗೆ ಒಂದು ತರದ ಅನಂದ ವಾಗುವದು. ಆದರೆ "ಅದೇ ತಂದೆಯು ತಾನು ಗೌಡನಾಗುವದನ್ನು ಸಹಿಸನಲ್ಲಾ!" ಎಂದು ದುಃಖವೂ ಆಗುವದು. "ನಮಗೆ ಮಾತ್ರ ಗೌಡರಾಗಲಿಕ್ಕೆ ಬರುವದಿಲ್ಲವಂತೆ. ಏಕೆ? ನಾವು ಮನುಷ್ಯರಲ್ಲವೆ? ನಮ್ಮಲ್ಲಿ ಜ್ಞಾನವಿಲ್ಲವೇ? ನಾವು ಕೀಳ ಕುಲದವರಂತೆ-ಇವರು ಹೆಚ್ಚಿನ ಕುಲದವರಂತೆ. ನಾವೇನು ಬೇಕೆಂದು ಇಚ್ಛಿಸಿ ಕೀಳ ಕುಲದವರಾಗಿದ್ದೇವೆ? ನಾವು ಈ ಕುಲದಲ್ಲಿ ಹುಟ್ಟಿದ್ದು ನಮ್ಮ ತಪ್ಪೇ? ನಾವು ಕೀಳು ಕುಲದವರೆಂದು ದೇವರೇನು ನಮ್ಮ ಹಣೆಯ ಮೇಲೆ ಬರೆದು ಹುಟ್ಟಿಸಿಲ್ಲವಲ್ಲ? ಹಾಗಾದರೆ ಯಾರು ಹೇಳುವದು ನಾವು ಕೀಳು ಕುಲದವರೆಂದು? ಇದೇ-ಇದೇ ಸ್ವಾರ್ಥಿಗಳು!-ನಾವು ಮನುಷ್ಯರಾಗಿ ಹುಟ್ಟಿದರೂ ಪಶುಗಳಿಗಿಂತ ಕಡೆಮಾಡಿ ನಡೆಸಿಕೊಳ್ಳುತ್ತಾರೆ. ಇವರು ಸೆಟೆಸೆಟೆದು ಎದೆಯುಬ್ಬಿಸಿ ನೆಲ ನೋಡದೆ ನಡೆಯುವಾಗ ಬೊಗ್ಗಿ ಬೊಗ್ಗಿ ಸಲಾಮು ಹೊಡೆಯಬೇಕು ನಾವು. ಇದೇನು ಒಂದೆರಡು ದಿನದ ಮಾತೇ! ಈ ಜಾತಿಯಲ್ಲಿ ಹುಟ್ಟಿದವರು-ಹುಟ್ಟುವವರು ಹೀಗೇ ನಡೆಯಬೇಕು. ಇವರ ಸೇವೆಮಾಡಿಗಳಿಸಿದ್ದೇನು? ಅಪಮಾನಕಾರಕ ತುಚ್ಛಮಾತುಗಳು!"

"ನಾವು ಹೊಲವನ್ನು ಮುಟ್ಟಿದರೆ ಮೈಲಿಗೆಯಿಲ್ಲ. ಅದನ್ನು ಉತ್ತು ಬಿತ್ತಿ ಬೆವರು ಸುರಿಸಿದರೆ ಮೈಲಿಗೆಯಿಲ್ಲ. ಬಂದ ಬೆಳೆಯನ್ನು ಮನೆಗೆ ಒಯ್ದು ಸುಖವಾಗಿ ತಿನ್ನುವಾಗ ಮೈಲಿಗೆಯಿಲ್ಲ. ಆದರೆ ನಮ್ಮನ್ನು ನೋಡಿದರೆ ಮಾತ್ರ ಇವರಿಗೆ ಮೈಲಿಗೆಯಾಗುತ್ತದೆ."

"ದೇವರಲ್ಲಿಯೂ ಇದೇ ಪಕ್ಷಪಾತ ಇರಬೇಕೇ? ನಾವು ಮಾತ್ರ ಗುಡಿಯೊಳಗೆ ಪ್ರವೇಶಿಸುವಹಾಗಿಲ್ಲ. ಆದರೆ ಹೆಚ್ಚಿನ ಕುಲದವರೆಂದು ಹೇಳಿಕೊಳ್ಳುವ ಇವರು ಬೇಕಾದಂಥ ಕುಕರ್ಮ ಮಾಡಿದರೂ ದರ್ಶನಪುಣ್ಯ ಸಿಗುತ್ತದೆ. ನಾವು ಎಂಥ ಮಡಿಯಿಂದ ಮಾಡುತ್ತೇವೆಂದರೂ ಸಾಧ್ಯವಿಲ್ಲ. ಬೇಡೆ ಬೇಡ ನಮಗೆ. ಇಂಥ ದೇವರೂ ಬೇಡ- ಅವನ ಈ ಭಕ್ತರೂ ಬೇಡ."

"ಎಲ್ಲಿ ನಾವು ಮನುಷ್ಯರು-ಮನುಷ್ಯರೆಂದು ತಿಳಿಯಡುತ್ತೇವೆಯೋ, ಅಲ್ಲಿ ನಾವೇಕೆ ಸೇರಬಾರದು? ಪಶುಗಳಿಂದ ಮನುಷ್ಯಸ್ಥಾನಕ್ಕೇರುವದು,

ಇದೂ ಒಂದು ಪಾಪವೇ? ಇಲ್ಲ. ಇಲ್ಲ. ಈ ಸ್ವಾರ್ಥಿಗಳು ಪಾಪ ಪುಣ್ಯಗಳನ್ನು ತಮ್ಮ ಮನಸ್ಸಿಗೆ ಬಂದಂತೆ ಹೊಂದಿಸಿಕೊಂಡಿದ್ದಾರೆ. ಇವರ ಪಾಪ ಪುಣ್ಯ ಇವರಿಗೇ ಇರಲಿ!”

“ನಾನು ಈ ಊರ ಗೌಡನಾಗಿಯೇ ಸಾಯುವೆನು! ಆದರೆ ನನ್ನ ತಂದೆ? ನನ್ನ ತಂದೆಗೇನು ತಿಳಿಯುತ್ತದೆ? ಇಂದು ಪಾಪ ಪುಣ್ಯ ಸ್ವರ್ಗ ನರಕಗಳ. ಮಾತು ಮಾತಾಡುವವನು ನಾಳೆ ನಾನು ಗೌಡನಾದೆನೆಂದರೆ ತಾನೇ ನೋಡಿ ಹರುಷ ಪಡುತ್ತಾನೆ. ಹುಟ್ಟಿಂದಿನಿಂದ ಗುಲಾಮನಾಗಿಯೇ ಬೆಳೆದ ಅವನಿಗೆ ಸ್ವತಂತ್ರನಾಗುವದೂ ಒಂದು ಪಾಪವಂತೆ ಕಾಣಿಸುತ್ತದೆ.” ಹೀಗೇ ಏನೇನೋ ವಿಚಾರಮಾಡುತ್ತಾ ಕುಳಿತ ದುರ್ಗಪ್ಪನಿಗೆ ರಾತ್ರಿ ಯಾವಾಗಾಯಿತೆಂಬುದರ ಕಲ್ಪನೆಯೇ ಇಲ್ಲ.

ಮರಿಯಪ್ಪ ನಚ್ಚು ಕುದಿಸಿ ಅವನನ್ನು ಊಟಕ್ಕೆ ಕರೆದಾಗ್ಗೇ ಅವನಿಗೆ ಎಚ್ಚರ. ತಂದೆ ಮಕ್ಕಳಿಬ್ಬರೂ ಒಂದೇ ಗಂಗಾಳದಲ್ಲಿ ಊಟಕ್ಕೆ ಕೂತರು. ದುರ್ಗಪ್ಪ ಅರಿವಿಲ್ಲದೆ ಹಾಗೇ ತುತ್ತು ಹಾಕಿಕೊಳ್ಳುತ್ತಿದ್ದ ಬಾಯಿಗೆ. ಮರಿಯಪ್ಪನೇ ಮಾತಿಗೆ ಮೊದಲುಮಾಡಿದ.

“ದುರ್ಗ್ಯಾ?”

“ಓ–ಏನಪಾ?”

“ನಿಮ್ಮವ್ವಂದು ನಿನಗ ನೆನಪೈತೇನಲಾ ?”

“ಚೂರ ಚೂರೈತಿ. ಅದ್ಯಾಕೀಗ ಮಾತು ?”

“ಏನಿಲ್ಲ. ಇವತ್ತಿಂದು ನಿನ್ಮಾತು ಕೇಳಿ ಅಕೀ ನೆಪ್ಪಾತು. ನೀ ಚಲೋ ತೆಂಗ ಬೆಳದು ದೊಡ್ಡವಾಗಿ ಚಾಕರಿ ಮಾಡುವಂಗಾಗುತ್ತಲೇ ನಾ ಕೆಲಸ ಬಿಡಬೇಕು. ಇಬ್ಬರೂ ಕೂಡಿ ಅಡ್ಯಾಡಿ ಒಂದ ಚೆಂದನ್ನ ಹೆಣ್ಣ ತಗದು ನಿನ್ನ ಲಗ್ನಾ ಮಾಡಬೇಕು. ನೀವು ಗಂಡಾ ಹೆಂತಿ ಚೆಂದಾಗಿರುದನ್ನ ಕಣ್ಣಾನ ಪ್ರೀತಿ ತೀರೂಮಟಾ ನೋಡಿ, ಒಂದಿನ ದೇವರು ಕರದಾಗ ‘ಶಿವಶಿವಾ’ ಅಂತ್ಹೇಳಿ ಸಾಯಬೇಕು. ಅಂತ್ಹೇಳಿ ಹಗಲೆಲ್ಲಾ ನನ್ನ ಮುಂದ ಅಂತಿದ್ಲು. ಆದರೇನ ಮಾಡುದೈತಿ? ತಿನ್ನ ಉಣ್ಣ ಬಾಯಾಗ ಮಣ್ಣ ಹಾಕೊಂಡ ಹೋದ್ಲು! ನಾನರ ಒಬ್ಬವ ಬದಿಕಿ ಇರೂದರಾಗ ನಿಂದಟು ಲಗ್ನಾಮಾಡಿ ನೀ ಅಟು ಚೆಂದಾಗಿ ಬಾಳೆ ಮಾಡಿರೂದು ನೋಡಿಕೊಂಡು ಸಾಯಬೇಕಂದರ

ಇದ್ದ ಹೊತ್ತಿನ್ಯಾಗ ನೀ ಒಂದ ನಗವ ಬಿಟ್ಟಬಿಟ್ಟಿ" ಎಂದು ನಿಟ್ಟುಸಿರು ಹಾಕಿದ ಮರಿಯಪ್ಪ.

ತನ್ನ ತಂದೆಯ ಮಾತು ಕೇಳಿ ದುರ್ಗಪ್ಪನಿಗೆ ತಾಯಿಯ ನೆನಪು ಬಂದಿತು. "ಅವಳು ಜೀವಂತ ಇದ್ದಿದ್ದರೆ ತಮ್ಮ ಮನೆ ಹೇಗಿರಬಹುದಿತ್ತು?" ಹೀಗೆ ಅನೇಕ ತರ್ಕಗಳನ್ನು ತನ್ನಲ್ಲಿಯೇ ಗುಣಿಸಿಕೊಳ್ಳಹತ್ತಿದ.

"ಅವಳು ಇದ್ದಿದ್ದರೆ ಇಷ್ಟೊತ್ತಿಗೆ ನನ್ನ ಲಗ್ನ ಆಗಿ ಹಳೇಮಾತಾಗುತಿತ್ತು. ನಾನೂ ಒಂದೆರಡು ಮಕ್ಕಳ ತಂದೆ ಆಗುತಿದ್ದೆ. ಯಾಕ ಅದರಾಗೇನೈತಿ? ನನ್ನ ಸರಿಕಿನವ ದ್ಯಾಮ್ಯಾ-ಅವಗಿಲ್ಲ ಈಗ ಮೂರು ಮಂದಿ ಮಕ್ಕಳು? ಆದರ ಅವನ ಹೆಂಡತಿ? ಥೂ, ಅಕೀ ಮೋತಿ ನೋಡುವಂಗಿಲ್ಲ! ಅದಕ್ಯಾಕಿಷ್ಟು ಚಿಂತೆ? ನಾಳೆ ನಾ ಗೌಡ ಆದೆನಂದರ ಬೇಕಾದಂಥ ಹುಡುಗಿ ತರಬಹುದು" ಹೀಗೆ ಏನೇನೋ ವಿಚಾರ ಮಾಡುತ್ತ ತನ್ನ ಕಲ್ಪನೆ ಕಂಡು ತಾನೇ ನಕ್ಕ ದುರ್ಗಪ್ಪ.

"ಯಾಕ ನಗತೀಲೇ ಹಿಂಗ ಹುಚ್ಚರಂಗ?" ಎಂದು ಕೇಳಿದ ಮರಿಯಪ್ಪ.

"ಏನಿಲ್ಲಳಿ-ನಿನ್ನ ಮಾತು ಕೇಳಿ ನಗೀ ಬಂತು" ಎಂದು ಉತ್ತರ ಕೊಟ್ಟ.

ಮರಿಯಪ್ಪನಿಗೂ ಆನಂದವಾಯಿತು. "ಮದಿವಿ ಅಂದರ ಎಷ್ಟ ಉಬ್ಬತಾರ ಈಗಿನ ಹುಡುಗರು!" ಎಂದು ತನ್ನಷ್ಟಕ್ಕೆ ತಾನೇ ಅಂದು ಕೊಳ್ಳದೆ ಇರಲಿಲ್ಲ.

"ಇನ್ನೊಂದು ನಾಕ ತಿಂಗಳದಾಗ ಎಲ್ಲೀರ ಹುಡಿಕ್ಯಾಡಿ ಇವಗೊಂದು ಗಂಟಹಾಕಿ ಬಿಟ್ಟೆನೆಂದರ ಆಗ ಇವ ತಾನs ಕಾಲ ಮುರಕೊಂಡ ಮನ್ಯಾಗ ಬೀಳತಾನ. ಇವಗ ಮೊದಲಟು ದಗದಕ್ಕ ಹಚ್ಚಬೇಕು. ದಗದಕ್ಕ ಹೋಗಾಕ ಹತ್ತಿದ ಮ್ಯಾಲೆ ಬೇಡಿದರ ರೂಪಾಯಿ ಕೊಟ್ಟ ಕೊಡತಾರ ಗೌಡರು ಲಗ್ನಕ್ಕ. ಲಗ್ನಕ್ಕೆಷ್ಟು ಖರ್ಚ ಬಂದೀತು?" ಹೀಗೆ ಮರಿಯಪ್ಪ ಮುಂದಿನ ಆಲೋಚನೆಯಲ್ಲಿಯೇ ಮಗ್ನನಾದ.

ಊಟ ಮುಗಿಯಿತು. ಕೈ ತೊಳೆದುಕೊಂಡು ಹೊರಗೆ ಬಂದರು.

ಗೌಡರ ಮನೆಗೆ ಹೋಗಬೇಕು ಮಲಗಿಕೊಳ್ಳಲಿಕ್ಕೆ '' ಎಂಬುದು ನೆನ ಪಿಗೆ ಬಂದಿತು ಮರಿಯಪ್ಪನಿಗೆ.

" ರಾತ್ರಿ ಎಷ್ಟ ಆಗಿದ್ದೀತೀಗ ? '' ಎಂದು ಕೇಳಿದ ಮರಿಯಪ್ಪ. "ಇಷ್ಟ ಯಾಡ ಮೂರ ತಾಸ ಆಗಿದ್ದೀತು " ಎಂದು ಉತ್ತರ ಕೊಟ್ಟ ದುರ್ಗಪ್ಪ. ಮಗ್ಯಾ–ಇವತ್ತಟು ನನಗ ಕೆಲಸೈತಿ ಹೊರಗ ಹೋಗತೇನು. ಇಲ್ಲೇ ಮಸ್ಯಾಗ ಮಕ್ಕೊ. ಎಲ್ಲ್ಯಾ ಹೋಗಬ್ಯಾಡ ತಿರಿಗಿಕೊಂತ ಮಂಗ್ಯಾ ನಂಗ''

" ಒಲ್ಲೆ '' ಅಂದರೆ ಮತ್ತೆ ಮುದುಕ ಏನಾದರೂ ಮಾತಾಡಲು ಸುರುವು ಮಾಡುತ್ತಾನೆ, ಎಂದು ದುರ್ಗಪ್ಪ " ಹು '' ಎಂದು ಗೋಣು ಅಲ್ಲಾಡಿಸಿದ.

ಅದನ್ನು ಕಂಡಮೇಲಂತೂ ಮರಿಯಪ್ಪನಿಗೆ ಹಿಡಿಸಲಾರದಷ್ಟು ಆನಂದವಾಯಿತು. " ಇನ್ನೂ ಚಿಕ್ಕಬುದ್ಧಿ. ತೆಲಿಮ್ಯಾಗಿನ ಮಾಸ ಆರಿಲ್ಲ. ಯಾರೋ ತೆಲ್ಯಾಗ ತುಂಬ್ಯಾರ, ಹಂಗ–ಹಿಂಗ ಅಂತ್ಹೇಳಿ. ಅದಕ ಹಚ್ಚು ಚ್ಚಾಕಾರ ಮಾತಾಡತಿತ್ತು ಮುಂಜಾನೆ. " ಎಂದು ತನ್ನಷ್ಟಕ್ಕೆ ತಾನೇ ಸಮಾಧಾನ ಹೇಳಿಕೊಂಡು ಗೌಡರ ಮನೆಗೆ ಬಂದ.

ಗೌಡರು ಮರಿಯಪ್ಪನ ದಾರಿಯನ್ನೇ ಕಾಯುತ್ತಾ ನಿಂತಿದ್ದರು. ಅವನು ಬರುತ್ತಲೇ ಎಂದೂ ಇಲ್ಲದ ಆದರಾತಿಥ್ಯದಿಂದ ರೊಟ್ಟಿಕೊಟ್ಟರು ತಿನ್ನಲಿಕ್ಕೆ. ಅಲ್ಲದೆ ಮನೆಯನ್ನೆಲ್ಲ ಹುಡುಕಾಡಿ ಒಂದು ಹರಕು ಕಂಬಳಿ ಯನ್ನು ತಂದು ಕೊಟ್ಟರು ಮರಿಯಪ್ಪನಿಗೆ ಹೊದ್ದುಕೊಳ್ಳಲಿಕ್ಕೆ. ಮತ್ತು ಒಳ್ಳೇ ಸಲಿಗೆಯಿಂದ ಮಾತಾಡಹತ್ತಿದರು.

ಗೌಡರ ಸಲಿಗೆಯಮಾತಿನಿಂದ ಮರಿಯಪ್ಪನಿಗೇನು ಆನಂದವಾಗಲಿಲ್ಲ. ಅವನು ಮತ್ತಷ್ಟು ಚಿಂತೆಗೊಳಗಾದ. " ಎಪ್ಪಾ ಧನ್ಯಾರ, ಎಪ್ಪಾ ಧನ್ಯಾರ'' ಅಂತ್ಹೇಳಿ ಸಾವಿರ ಸಲಾ ಮಾತಾಡಿಸಿದಾಗ ಒಮ್ಮೆ ಮಾತಾಡುವ ಗೌಡರು ಇಂದೇಕಿಷ್ಟು ಸಲಿಗೆಯಿಂದ ಮಾತಾಡಹತ್ತಿದ್ದಾರೆ?'' ಎಂಬುದು ಮಾತ್ರ ಮರಿಯಪ್ಪನ ಬುದ್ಧಿಗೆ ನಿಲುಕಲಿಲ್ಲ.

" ಮರಿಯಾ? '' ಎಂದರು ಗೌಡರು.

" ಎನರಿ ಧನ್ಯಾರ ? "

" ನಿನ್ನ ಮಗ್ಗ ನಾಳಿಂದ ಕೆಲಸಕ್ಕ ಬಾ ಅನ್ನು. ಹಿಂಗ ಉಂಡು ಉಡಾಳನಂಗ ಅಡ್ಡ್ಯಾಡೂದು ಛಲೋ ಅಲ್ಲ. ಮನಸ್ಯಾ ಯಾವಾಗೂ ಕೆಲಸದ ವ್ಯಾಗಿರಬೇಕು.!"

" ನಾನು ಇಪತ್ತ ನಿಮಗ ಅದನ್ನs ಹೇಳಬೇಕಂತ್ಹೇಳಿ ಮಾಡಿದ್ನಿರಿ. ನಿಮ್ಮ ಪಾದಕ ಬೀಳತೇನು. ಅವನ್ನಷ್ಟು ದಾರೀಗ್ಹಚ್ಚಿ ಪುಣ್ಯಾಕಟಕೋಳರಿ" ಎಂದ ದೈನ್ಯದಿಂದ.

"ಅಲ್ಲೋ--ನಾವೇನರಾ ಕೆಲಸಾ ಬಿಡಿಸಿದಿವೇನು ? ತಾನಾಗಿ ಕೆಲಸಕ್ಕ ಒಲ್ಲೆ ಅಂದಮ್ಯಾಲೆ ಅದರಾಗೇನ ಜುಲುಮಿ ಮಾಡೂದೈತೀ ? " ಕೇಳಿದರು ಗೌಡರು.

"ಹುಡುಗ್ಗ ಇನ್ನೂ ಬುದ್ಧಿ ಬಂದಿಲ್ಲರಿ."

" ನಾವೂ ನಿನ್ನ ಮೋತಿ ನೋಡಿ ಅವನ್ನ ಮುಂದಕ ಕರೀತೇವೇನಪಾ. ತಿಳೀತಿಲ್ಲೋ ? "

"ನಾಳಿಂದ ಕಳಿಸಿಕೊಡತೇನರಿ ಅವನ್ನ ?"

" ಕಳಿಸಿಕೊಡಲಾ " ಎಂದ ಹೇಳಿದರು ಗೌಡರು.

ರಾತ್ರಿ ಬಹಳವಾಯಿತೆಂದು, ಮರಿಯಪ್ಪನಿಗೆ ಕದಾ ಗಟ್ಟಿ ಮಾಡಿಕೊಂಡು ಛಾವಣಿಯಲ್ಲಿ ಮಲಗುವಂತೆ ಹೇಳಿ ತಾವು ಒಳಗೆ ಹೋದರು.

ಮರಿಯಪ್ಪನೂ ತನ್ನ ಮಗನಿಗೆ ತಿರುಗಿ ಕೆಲಸದ ಮೇಲೆ ಬರುವಂತೆ ಹೇಗೆ ಮನವಲಿಸಬೇಕೆಂದು ವಿಚಾರ ಮಾಡುತ್ತಾ ಮಲಗಿಕೊಂಡನು. ಹಾಗೆ ನಿದ್ದೆ ಹತ್ತಿತು.

ಮಧ್ಯರಾತ್ರಿಯ ಸಮಯ. ಎಲ್ಲೆಲ್ಲಿಯೂ ಕತ್ತಲವೇ ಕತ್ತಲ. ಒಬ್ಬರ ಮುಖ ಒಬ್ಬರಿಗೆ ಕಾಣುವಹಾಗಿಲ್ಲ. ಅಂಥ ಕತ್ತಲಲ್ಲಿಯೇ ಹತ್ತು ಹದಿನೈದು ಜನರು ಹೊರಟಿದ್ದಾರೆ ಗೌಡರ ಮನೆಯಕಡೆಗೆ. ಗೌಡರ ಮನೆಯು ತೀರ ಸಮೀಪಕ್ಕೆ ಬಂದಮೇಲೆ " ಠೇರೋ " ಎಂದು ಆಜ್ಞೆಯಾಯಿತು.

ಎಲ್ಲರೂ ಒಮ್ಮೆಲೇ ನಿಂತರು ಸ್ತಬ್ಧವಾಗಿ.

" ಅಬ್ದುಲ-ರಹಮಾನ-ಮೋದಿನ, ನೀವು ಹಿಂದಿನ ಬಾಜುವಿಗೆ ಹೋಗಿ ಯಾರೂ ಅತ್ತಕಡೆಯಿಂದ ಪಾರಾಗದಂತೆ ನೋಡಿಕೊಳ್ಳಿರಿ. ಹುಸೇನಿ-ನೀನು ಚಿಮಣಿಎಣ್ಣೆ ಉಗ್ಗು. ಕಾಶೀಮು-ನೀನು ನನ್ನ ಸೀಟಿಯ ಸದ್ದು ಕೇಳುತ್ತಲೇ

ಕೊಳ್ಳಿ ಇಡು ಮನೆಗೆ. ದೌಲತ್–ಲೇ ನೀನಲೇ ದುಗ್ಯಾ್ಯ? ಎತ್ಲಾಗ ನೋಡಿ ಕೊಂತನಿಂತಿ ಕಿಸಬಾಯುಯುಂಗ! ನೀ ಬಾಗಿಲ ಮುಂದೆ ನಿಲ್ಲು. ಹೊರಗೆ ಯಾರಾದರೂ ಬಂದರ ಅವರನ ಅಲ್ಲೇ ಮುಗಿಸಿಬಿಡು. ಉಳಿದವರೆಲ್ಲರೂ ನಿಂತಲ್ಲಿಯೇ ನಿಂತು ಹೊರಗಿನಿಂದ ಯಾರೂ ಸಹಾಯಕ್ಕೆ ಬರದಂತೆ ನೋಡಿ ಕೊಳ್ಳಿ ”

ಎಲ್ಲರೂ ತಮ್ಮ ತಮ್ಮ ಕೆಲಸ ನಿರ್ವಹಿಸಲಿಕ್ಕೆ ಒಳ್ಳೇ ಸಿಸ್ತಿನಿಂದ ಎದೆ ಸೆಟಿಸಿ ಮುಂದೆ ನಡೆದರು. ದುಗ್ಯಾ್ಯ ಕೈಯಲ್ಲಿ ಬಡಿಗೆ ಹಿಡಿದುಕೊಂಡು ಬಾಗಿಲ ಮುಂದೆ ನಿಂತುಕೊಂಡ. ಚಿಮಣಿಎಣ್ಣೆ ಉಗ್ಗಿ ಎಲ್ಲವೂ ಸಜ್ಜಾಯಿತು. ಕೊಳ್ಳಿ ಇಡಲಿಕ್ಕೆ ಮುಂದಾಳುವಿನ ಸೂಚನೆಯಾಯಿತು. ಬೆಂಕಿಹತ್ತಿತು. ಒಮ್ಮೆಲೇ ಸುತ್ತು ಕಡೆಗೆ ವ್ಯಾಪಿಸಿತು.

“ ಧೀನ–ಧೀನ ” ಎಂದು ಎಲ್ಲರೂ ಜಯಘೋಷ ಮಾಡಿದರು ಏಕ ಕಂಠದಿಂದ.

ಒಮ್ಮೆಲೇ ಬೆಳಕು ಹೆಚ್ಚಾದ್ದರಿಂದ ಮರಿಯಪ್ಪನಿಗೆ ಎಚ್ಚರವಾಯಿತು. ನೋಡುತ್ತಾನೆ. ಸುತ್ತೂ ಕಡೆಗೆ ಬೆಂಕಿ!

“ ಲೊಬೋ–ಲೊಬೋ ” ಎಂದು ಬೊಬ್ಬೆ ಕುಟ್ಟಿದ ನಾಲ್ಕೈದು ಸಾರೆ.

ಹೊಯ್ಕೊಳ್ಳುವ ಧ್ವನಿಯನ್ನು ಕೇಳಿ ಹೊರಗಿನವರು ಗಹಗಹಿಸಿ ನಕ್ಕರು. “ಹೊಯ್ಕೋಳರಿ–ಹೊಯ್ಕೋಳರಿ ” ಎಂದ ದುಗ್ಯಾ್ಯ ನಗುತ್ತಾ.

ಹೊರಗಿನ ಧ್ವನಿಕೇಳಿ–“ ಹೊರಗೆ ಯಾರೋ ಇದ್ದಾರೆ. ಬಾಗಿಲವನ್ನು ತೆರೆದರೆ ಅವರಾದರೂ ಬಂದು ಸಹಾಯ ಮಾಡ್ಯಾರು” ಎಂದು ಮರಿಯಪ್ಪ ಬೆಂಕಿಯೊಳಗಿಂದ ಜಿಗಿಯುತ್ತಾ ಬಾಗಿಲದ ಕಡೆಗೆ ಓಡಿಬಂದ. ಬಾಗಿಲವನ್ನು ತೆರೆದು ಹೊಸ್ತಿಲದ ಹೊರಗೆ ಕಾಲಿಡುತ್ತಲೇ ಡುಬ್ಬದಮೇಲೆ ಬಲವಾಗಿ ಒಂದು ಏಟು ಬಿತ್ತು.

“ ಅಯ್ಯಯ್ಯೋ ಎಪ್ಪಾ! ” ಎಂದು ಚೀರಿದವನೆ ಮತ್ತೆ ಒಳಗೆ ಓಡಿದ ಮರಿಯಪ್ಪ.

ತನ್ನ ತಂದೆಯ ಧ್ವನಿಯ ಗುರುತು ಒಮ್ಮೆಲೇ ಹತ್ತಿತು ದುರ್ಗಪ್ಪನಿಗೆ. ಕೂಡಲೆ ಅವನ ಹಿಂದೆಯೇ ಓಡಿದ.

“ಎಪ್ಪಾ-ಒಳಗ ಬೆಂಕಿ ಐತಿ. ಹೋಗಬ್ಯಾಡ. ನಾ ದುರ್ಗ್ಯಾ ಆದೇನಿಲ್ಲಿ. ಬಾ” ಎನ್ನುತ್ತಾ ಹಾಗೇ ಒಳಗೆ ಓಡಿದ.

ದುರ್ಗಪ್ಪನೂ ಒಳಗೆ ಹೋದದ್ದನ್ನು ಅಲ್ಲಿಯೇ ನಿಂತಿದ್ದ ಮುಖ್ಯಸ್ತನು ಕಂಡು,

“ಇವ್ಯಾಕ ಒಳಗಹೋದ?” ಎಂದ ತನ್ನಷ್ಟಕ್ಕೆ ತಾನೇ ಘಟ್ಟಿಯಾಗಿ.

“ಹುಚ್ಚ ಹುಡುಗ!” ಎಂದು ಮಗ್ಗುಲದಲ್ಲಿ ನಿಂತವ ಉತ್ತರ ಕೊಟ್ಟ.

“ಬಾಗಿಲದಲ್ಲಿ ನೀನೇ ನಿಲ್ಲಬಾ. ಹೊರಗೆ ಯಾರನ್ನೂ ಬಿಡಬೇಡಾ” ಎಂದು ಆಜ್ಞೆ ಕೊಟ್ಟು ಮುಖ್ಯಸ್ಥ ಹಿಂದಕ್ಕೆ ಸರಿದುಬಂದ.

ಒಳಗೆ ಮನೆಯಲ್ಲಿ ಒಂದೇ ಸವನೆ ಚೀತ್ಕಾರ ನಡೆದಿತ್ತು. ಹೊರಗೆ ಧೀನ-ಧೀನ......ಝಿಂದಾಬಾದ” ಎಂದು ಜಯಜಯಕಾರ ನಡೆದಿತ್ತು.

— ಹೊಬಳ್ಳ ಹೂಗಾರ

---

೧೯೪೭ರ ದಿ॥ ಶೇಷಮ್ಮ ಭಾಸ್ಕರರಾಯರ ಜ್ಞಾಪಕ ಸ್ಪರ್ಧೆಯಲ್ಲಿ ಬಹುಮಾನ ಪಡೆದ 'ಹುಚ್ಚ ಹುಡುಗ' ಎಂಬ ಈ ಕತೆಯನ್ನು ಈ ಸಂಗ್ರಹದಲ್ಲಿ ಪುನರ್ಮುದ್ರಿಸಲು, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಿಂದ ಅನುಮತಿಯನ್ನು ದೊರಕಿಸಲಾಗಿದೆ.

ಮೂರನೆಯ ಎಸಳು

# ರಾಮು

ರಾಮು ಕ್ಲಾಸಿನಲ್ಲಿ ಕೂಡ್ರುತ್ತಿದ್ದುದು ಯಾವಾಗಲೂ ಕಡೆಯ ಬೆಂಚಿನ ಮೇಲೆಯೇ. ಪುಸ್ತಕಗಳಲ್ಲಿಯೇ ಮುಖವನ್ನು ಹುದುಗಿಸಿಕೊಂಡು ಕೂಡ್ರುವದು ಅವನ ಸ್ವಭಾವ. ಯಾರು ಮಾತಾಡಿಸಿದರೂ ಅವನು ಮಾತಾಡುತ್ತಿರಲಿಲ್ಲ. ಮುಖದಮೇಲೆ ಯಾವಾಗಲೂ ದೈನ್ಯ ಭಾವನೆ ದುಃಖದಛಾಯೆ. ಯಾರಾದರೂ ಅವನ ಬಗ್ಗೆ ಏನಾದರೂ ಸ್ವಲ್ಪ ಮಾತಾಡಿದರೆ ಸಾಕು—ಅವರಿಗೆ ತಾವೇ ಉತ್ತರ ಕೊಡಲಿಕ್ಕೆಂದು ಅವನ ವಿಶಾಲವಾದ ಕಣ್ಣುಗಳಲ್ಲಿ ಅಂಚುಮುಟ ತುಂಬಿಕೊಂಡು ಕಣ್ಣೀರು ಸದಾವಕಾಲ ನಿಂತಿರುತ್ತಿದ್ದವು. ಅವನ ಈ ತರದ ಅಳುಬುರುಕತನವನ್ನು ಕಂಡು ಹುಡುಗರು

ಅವನನ್ನು ಮತ್ತಷ್ಟು ಪೀಡಿಸುತ್ತಿದ್ದರು. ಮಾಸ್ತರರು ಯಾವ ಪ್ರಶ್ನೆಯನ್ನು ಕೇಳಿದರೂ ಅದಕ್ಕೆ ರಾಮು ಉತ್ತರ ಕೊಡುತ್ತಿರಲಿಲ್ಲವಾದ್ದರಿಂದ ಮಾಸ್ತರರು ಸಹ ಅವನ ಬಗ್ಗೆ ಒಮ್ಮೊಮ್ಮೆ ನಗೆಯಾಡುತ್ತಿದ್ದರು. ಯಾರು ಎಷ್ಟೇ ಪೀಡಿಸಿದರೂ ಅದಾವದಕ್ಕೂ ಉತ್ತರ ಕೊಡದೆ ಕಣ್ಣೀರು ಸುರಿಸುತ್ತಿದ್ದ ರಾಮು. ಅವನ ಈ ತರದ ಮೂಕರೋಧನಾವಸ್ಥೆಯೇ ನನ್ನನ್ನು ಅವನ ಗೆಳೆಯನನ್ನಾಗಿ ಮಾಡಿತು. ಬರಬರುತ್ತಾ ನಾವು ಒಳ್ಳೇ ಜೀವದ ಗೆಳೆಯರಾದೆವು. ಆದರೂ ಸಹ ರಾಮು ತಪ್ಪಿಯಾವರೂ ನನ್ನ ಮುಂದೆ ತನ್ನ ದುಃಖದ ಕಾರಣವನ್ನು ತಿಳಿಸಿರಲಿಲ್ಲ. ನಾನೇ ತಿಳಿದುಕೊಳ್ಳಲು ಯತ್ನಿಸಿದಾಗ್ಗೆ, ಅದರ ಕಡೆಗೆಲಕ್ಷ್ಯಕೊಡದೆ, ಬೇರೆ ವಿಷಯವನ್ನೆತ್ತಿ ನಾನು ಸುಮ್ಮನಾಗುವಂತೆ ಮಾಡುತ್ತಿದ್ದನು. ಆ ಪ್ರಶ್ನೆಯನ್ನು ಅವನಿಗೆ ಮತ್ತೆ ಮತ್ತೆ ಕೇಳುವದರಿಂದ ಅವನಿಗೆ ತನ್ನ ದುಃಖದ ಅರಿವು ಮತ್ತಷ್ಟು ಆಗುತ್ತದೆ ಎಂಬುದನ್ನರಿತುಕೊಂಡ ನಾನು ಆ ಪ್ರಶ್ನೆಯನ್ನೆತ್ತುವದನ್ನೆ ಬಿಟ್ಟು ಬಿಟ್ಟೆ. ಅಲ್ಲದೆ ಅದೇ ಮೊದಲನೆಯ ಸಾರೆ ನಾವು ವಿಶ್ವವಿದ್ಯಾಲಯದ ಪರೀಕ್ಷೆಗೆ ಕೂಡ್ರುವವರಿದ್ದುದರಿಂದ ಹೆಚ್ಚಾಗಿ ಉಳಿದ ವಿಷಯಗಳನ್ನು ತಲೆಯಲ್ಲಿ ತುಂಬಿಕೊಳ್ಳಲೂ ಇಚ್ಛಿಸುತ್ತಿರಲಿಲ್ಲ. ರಾಮು ಹೆಚ್ಚು ಓದದಿದ್ದರೂ ಸಹ, ಓದಿದುದನ್ನೆಲ್ಲ ಸರಿಯಾಗಿ ತಿಳಿದುಕೊಂಡು, ತನ್ನದೇ ಆದ ಒಂದು ರೀತಿಗೆ ಆ ವಿಷಯಗಳನ್ನು ಮಾರ್ಪಡಿಸಿಕೊಳ್ಳುತ್ತಿದ್ದನಾದ್ದರಿಂದ, ಅವನಿಂದಲೇ ನಾನು ಹೊಸದಾಗಿ ಎಷ್ಟೋ ವಿಷಯಗಳನ್ನು ಕಲಿಯ ಬೇಕಾಗುತ್ತಿತ್ತು.

ವಿಶ್ವವಿದ್ಯಾಲಯದ ಪರೀಕ್ಷೆಗೆ ಕೂಡ್ರುವ ಅರ್ಹತೆಯನ್ನು ಪಡೆಯುವದಕ್ಕಾಗಿ, ಹಣದೊಂದಿಗೆ ವಿಶ್ವವಿದ್ಯಾಲಯಕ್ಕೆ ಅರ್ಜಿಗಳನ್ನು ಕಳಿಸಿಕೊಡುವ ದಿನವೂ ಬಂದಿತು. ಅಂದು ನನ್ನ ಸಂಭ್ರಮ ಅಷ್ಟಿಷ್ಟಲ್ಲ. ನನ್ನ ಅರ್ಜಿಯನ್ನು ದುಂಡಾದ ಅಕ್ಷರಗಳಲ್ಲಿ ತೀಡಿ ತೀಡಿ ಬರೆಯುವದರಲ್ಲಿಯೇ ಮಗ್ನನಾಗಿ ಬಿಟ್ಟಿದ್ದೆ. ನನ್ನ ಅರ್ಜಿಯನ್ನು ಮುಗಿಸಿ, ರಾಮುನು ಮುಗಿಸಿರುವನೋ ಇಲ್ಲವೋ? ಎಂಬುದನ್ನು ತಿಳಿದುಕೊಳ್ಳಲಿಕ್ಕೆ ಕಡೆಯ ಬೆಂಚಿನ ಕಡೆಗೆ ನೋಡಿದೆ. ಆದರೆ ಅಲ್ಲಿ ರಾಮು ಇರಲಿಲ್ಲ. ಅಂದು ನಾನು ತಂದೆಯವರ ಕಡೆಯಿಂದ ಹಣ ಇಸಿದುಕೊಂಡು

ಸಾಲೆಗೆ ಬರಬೇಕಾದರೆ ಸ್ವಲ್ಪ ತಡವಾಗಿದ್ದರಿಂದ ರಾಮನಮನೆಗೆ ಹೋಗದೆ ನೇರವಾಗಿ ಶಾಲೆಗೆ ಬಂದಿದ್ದೆ. ತಡವಾಗಿ ಸಾಲೆಗೆ ಬಂದ ನನ್ನನ್ನು ಮಾಸ್ತರರೂ ಸ್ವಲ್ಪ ಬಯ್ದದ್ದರಿಂದ ರಾಮನು ಸಾಲೆಗೆ ಬಂದಿರುವನೋ ಇಲ್ಲವೊ ಎಂಬುದನ್ನು ಸಹ ನೋಡದೆ, ನನ್ನ ಅರ್ಜಿಯನ್ನು ಬರೆಯುಲಿಕ್ಕೆ ಕುಳಿತುಕೊಂಡಿದ್ದೆ. ಆದ್ದರಿಂದ ರಾಮನ ಬಗ್ಗೆ ನನಗೆ ಎನೂ ತಿಳಿಯುದಾಯಿತು. ನನ್ನ ಮಗ್ಗುಲದಲ್ಲಿಯೇ ಕುಳಿತುಅರ್ಜಿಬರಿಯುತ್ತಿದ್ದ ಮತ್ತೊಬ್ಬ ಹುಡುಗನಿಗೆ ರಾಮನ ಬಗ್ಗೆ ಕೇಳಿದೆ. ಅವನು ಗೊತ್ತಿಲ್ಲ, ಎಂದು ಗೋಣು ಅಲ್ಲಾಡಿಸಿದನು. ಎನು ಮಾಡಬೇಕು? ಎಂದು ನಾನು ವಿಚಾರಿಸುತ್ತಿರುವಾಗಲೇ ಮಾಸ್ತರರು ನನ್ನನ್ನು ಕೇಳಿದರು,

“ ರಾಮು ಯಾಕ ಬಂದಿಲ್ಲಾ ಸಾಲಿಗೆ? ಪರೀಕ್ಷಕ್ಕ ಕೂಡ್ರಬೇಕಂತಾನೋ ಎನು ಇಲ್ಲೋ?”

ನನ್ನ ಎದೆಗೆ ಒಮ್ಮೆಲೆ ಗುಂಡು ಹೊಡೆದಂತಾಯಿತು. ರಾಮು ಸಾಲೆಗೆ ಬಂದಿಲ್ಲವೆಂಬುದು ನಿಚ್ಚಳವಾಯಿತು. ವಿಶ್ವವಿದ್ಯಾಲಯಕ್ಕೆ ಅರ್ಜಿಯನ್ನು ಕಳಿಸಿಕೊಡಲು ಅದೇ ಕಡೆಯದಿನ. ಆದಿನ ತಪ್ಪಿದರೆ ಆ ವರುಷವನ್ನು ಕಳೆದುಕೊಂಡಂತೆಯೇ. ರಾಮು ಸಾಲೆಗೇಕೆ ಬಂದಿಲ್ಲ? ಚೆನ್ನಾಗಿ ಅಭ್ಯಾಸ ಮಾಡಿಯೂ ಒಂದು ವರುಷ ಕಳೆದು ಕೊಳ್ಳುವನೇ? “ಮ್ಯಾಟ್ರಿಕ್ ಪರೀಕ್ಷೆ ಪಾಸಾಗುವದೇ ನನ್ನ ಜೀವನದ ಗುರಿ ’’ ಎಂದು ನನ್ನಮುಂದೆ ಹೇಳಿಕೊಳ್ಳುತ್ತಿದ್ದವನು ಅರ್ಜಿ ತುಂಬಲಿಕ್ಕೆ ಇಂದೇಕೆ ಸಾಲೆಗೆ ಬಂದಿಲ್ಲ? ಎಂಬ ನೂರಾರು ಪ್ರಶ್ನೆಗಳನ್ನು ನನ್ನಷ್ಟಕ್ಕೆ ನಾನೇ ಕೇಳಿಕೊಂಡೆ. ಆದರೆ ಅವುಗಳಲ್ಲೊಂದಕ್ಕೂ ಉತ್ತರ ಕೊಡುವ ಪರಿಸ್ಥಿತಿಯಲ್ಲಿ ನಾನಿಲ್ಲದ್ದರಿಂದ ನೇರವಾಗಿ ರಾಮನ ಮನೆಗೆ ಓಡಿದೆ. ಮನೆಗೆ ಹೋಗಿ ನೋಡುತ್ತೇನೆ, ರಾಮು ಸ್ವಸ್ಥಾಗಿ ತನ್ನ ಎರಡೂ ತೋಳುಗಳಿಂದ ತಲೆಯನ್ನು ಬಿಗಿದು ಗಂಟುಹಾಕಿ, ಮುಖವನ್ನು ತಲೆದಿಂಬಿನಲ್ಲಿ ಹುದುಗಿಸಿಕೊಂಡು, ತುಂಬಾ ಕಂಬಳಿ ಹೊದ್ದು ಕೊಂಡು ಮಲಗಿ ಬಿಟ್ಟಿದ್ದಾನೆ!

ಇದನ್ನು ಕಂಡು ನನಗೆ ಹೇಳತೀರದಷ್ಟು ಸಿಟ್ಟು ಬಂದಿತು. ಮನೆಯವರು ತಮ್ಮ ನೂರಾರು ಸಂಕಟಗಳನ್ನು ಬಚ್ಚಿಟ್ಟುಕೊಂಡು “ತಮ್ಮ ಹುಡುಗ ಹೇಗಾದರೂ ಸಾಲೆ ಕಲೆತು ಮುಂದೆಬರಲಿ ” ಎಂಬ ಉದ್ದೇಶದಿಂದ ತಾವು

ಉಪವಾಸ ಬಿದ್ದರೂ ಅದನ್ನಾರಿಗೂ ಹೇಳದೆ ತಮ್ಮ ಮಕ್ಕಳ ಸಾಲೆಗೆ ಹಣ ತೆರಬೇಕು. ಅದನ್ನು ಸ್ವಲ್ಪೂ ವಿಚಾರಿಸದೆ ತಮ್ಮ ಮನಸ್ಸಿಗೆ ಬಂದಂತೆ ವಿಚಿತ್ರವಾಗಿ ನಡೆದುಕೊಂಡು ತಮ್ಮ ಜೀವನವನ್ನೇ ಇವರು ಹಾಳುಮಾಡಿಕೊಳ್ಳುವದಲ್ಲದೆ—ತಮ್ಮ ಮನೆಯವರೂ ತೀವ್ರ ನಿರಾಶೆ ಪಡುವಂತೆ ಮಾಡಬೇಕು! ಇಂಥವರನ್ನೆಲ್ಲ ಸಾಲಾಗಿ ನಿಲ್ಲಿಸಿ ಗುಂಡು ಹಾಕಬೇಕು-ಎನ್ನುವಷ್ಟು ಸಿಟ್ಟು ಬಂದಿತು ನನಗೆ. ಆದ್ದರಿಂದ ನಾನು ಸ್ವಲ್ಪ ಸಿಟ್ಟಿನಿಂದಲೇ ರಾಮುನನ್ನು ಎಬ್ಬಿಸಿದೆ. ಅವನು ಎದ್ದು ಕುಳಿತುಕೊಂಡ ಮೇಲೆ ನನಗೆ ತಿಳಿಯಿತು-ರಾಮು ನಿದ್ದೆಮಾಡುತ್ತಿರಲಿಲ್ಲವೆಂಬುದು.

ರಾಮು ಎದ್ದು ಕುಳಿತಾಗ ಗುರುತು ಹತ್ತದಂತಿದ್ದನು. ಮುಖವು ಉಬ್ಬಿಕೊಂಡಿತ್ತು. ಅವನ ಕಣ್ಣುಗಳು ಮತ್ತಿಷ್ಟು ದೊಡ್ಡವಾಗಿದ್ದವು. ಅವನ ಅರ್ಧತೊಯ್ದ ತಲೆದಿಂಬು, ಅವನು ಮಲಗಿಕೊಂಡೇ ಕಣ್ಣೀರು ಸುರಿಸುತ್ತಿದ್ದನೆಂಬುದಕ್ಕೆ ಸಾಕ್ಷಿಯಾಗಿತ್ತು. ಅದನ್ನು ಕಂಡಮೇಲೆ ನನ್ನ ಸಿಟ್ಟೆಲ್ಲ ಕರಗಿ ನೀರಾಗಿ ಕಣ್ಣೀರ ರೂಪದಿಂದ ಹೊರ ಬಂದಿತು. ರಾಮು ಒಮ್ಮೆಲೇ ನನ್ನನ್ನು ತಬ್ಬಿಕೊಂಡು ಜೋರಾಗಿ ಬಿಕ್ಕಿ ಬಿಕ್ಕಿ ಅಳಹತ್ತಿದನು. ನಾನೂ ಕಣ್ಣೀರು ಸುರಿಸುತ್ತ ಅವನನ್ನು ಸಮಾಧಾನ ಪಡಿಸಿದೆ. ಸ್ವಲ್ಪ ಹೊತ್ತು ಬಿಕ್ಕಳಿಸಿ ಅತ್ತು-ಕಡೆಗೆ,

“ನಾನು ಹುಟ್ಟಬರಬಾರದಾಗಿತ್ತು ಬಸೂ—ನಾನು ಹುಟ್ಟಬರಬಾರದಾಗಿತ್ತು!” ಎಂದು ಮತ್ತಿಷ್ಟು ಅಳಹತ್ತಿದನು. ಕಡೆಗೆ ಆವನನ್ನು ಹಾಗೆಯೇ ಅಲ್ಲಿ ಕೂಡಗೊಟ್ಟರೆ ಮತ್ತಿಷ್ಟು ಅಳುವನೆಂದು ಅವನು ಒಲ್ಲೆಂದರೂ ಬಿಡದೆ ಜಗ್ಗಿಕೊಂಡು ಒಂದು ಹೋಟೇಲಿಗೆ ಕರೆದುಕೊಂಡು ಹೋದೆನು. ಅಲ್ಲಿ ಕಾಫಿ ಕುಡಿದು ನಂತರ ಅಡ್ಡಾಡಲಿಕ್ಕೆಂದು ವಿಲಿಗ್ರೌಂಡಿನ ಕಡೆಗೆ ನಡೆದೆವು.

ನಮ್ಮಂತೆಯೇ ವಾಯುವಿಹಾರಕ್ಕೆಂದು ಅನೇಕರು ಅಲ್ಲಿಗೆ ಬಂದಿದ್ದರು. ಅವರನ್ನೆಲ್ಲ ಬಿಟ್ಟು ದೂರ ಹೋಗಿ ಶಾಂತವಾದ ಒಂದು ಸ್ಥಳದಲ್ಲಿ ಇಬ್ಬರೂ ಕುಳಿತುಕೊಂಡೆವು. ಅಲ್ಲಿಯವರೆಗೆ ಇಬ್ಬರೂ ಒಂದು ಮಾತನ್ನೂ ಕೂಡಾ ಆಡಿರಲಿಲ್ಲ. ಆದರೆ ವಿಶ್ವವಿದ್ಯಾಲಯಕ್ಕೆ ಅವನು ಅರ್ಜಿಯನ್ನೇಕೆ ಕಳಿಸಲಿಲ್ಲಿನೆಂಬುದನ್ನು ಕೇಳಲಿಕ್ಕೆ ನನ್ನ ಮನಸ್ಸು ಮಾತ್ರ ಹಾತೊರೆಯು

ತ್ತಿತ್ತು. ಆದರೆ ರಾಮು ಮಾತ್ರ ಶೂನ್ಯ ದೃಷ್ಟಿಯಿಂದ ದೂರದಲ್ಲಿ ಏನನ್ನೋ ನೋಡುತ್ತಾ ಸುಮ್ಮನೆ ಕುಳಿತುಕೊಂಡಿದ್ದನು. ಮೇಲಿಂದಮೇಲೆ ಅವನ ಹೃದಯದಲ್ಲಿ ಬದಲಾಗುತ್ತಿದ್ದ ಭಾವನೆಗಳಿಗೆ ಅವನ ಮುಖವು ಕನ್ನಡಿಯಂತಿತ್ತು.

“ಜಗತ್ತು ನಾವು ಎಣಿಸಿದಂತೆ ಇಲ್ಲ, ಬಸೂ” ಎಂದು ಅವನೇ ಅನಿರೀಕ್ಷಿತವಾಗಿ ಮೌನ ಮುರಿದ.

“ನಾವು ಪ್ರೇಮ-ತ್ಯಾಗ ಎಂದು ಬಡಬಡಿಸುತ್ತಿದ್ದೇವೇನೋ ನಿಜ. ಆದರೆ ಈ ಜಗತ್ತಿನಲ್ಲಿ ಪ್ರೇಮ-ತ್ಯಾಗ ಇಲ್ಲವೇ ಇಲ್ಲ. ಅವು ಇವೆ ಎಂದು ತಿಳಿದುಕೊಂಡು ವರ್ತಿಸುವ ಮೂರ್ಖನು ತನ್ನನ್ನು ತಾನೇ ದುಃಖಕ್ಕೀಡು ಮಾಡಿಕೊಂಡು ನಾಶವಾಗಿ ಹೋಗುತ್ತಾನೆ. ಅವನಿಗಾಗಿ ಈ ಜಗತ್ತು ಸ್ವಲ್ಪೂ ಮರುಗುವದಿಲ್ಲ. ಜಗತ್ತನ್ನು ನಾವು ತಪ್ಪು ದೃಷ್ಟಿಯಿಂದ ನೋಡುತ್ತೇವೆ. ಆ ತಪ್ಪಿಗಾಗಿ ನಾವೇ ಶಿಕ್ಷೆ ಅನುಭವಿಸಬೇಕಾಗುತ್ತದೆ. ಜಗತ್ತೆಂದರೆ ಒಂದು ಪರ್ವತ ಇದ್ದ ಹಾಗೆ. ಅದರಲ್ಲಿ ಏನೂ ಸೌಂದರ್ಯವಿಲ್ಲ. ಅದರಲ್ಲಿ ಸೌಂದರ್ಯವಿದೆ ಎಂದು ಹೇಳುವದು ನಮ್ಮ ಆತ್ಮವಂಚಕತನವೇ ಹೊರತಾಗಿ ಮತ್ತೇನು ಇಲ್ಲ. ನಾವು ಅಲ್ಲಿ ಕಾಣುವದು ಪರ್ವತದ ಸೌಂದರ್ಯವನ್ನಲ್ಲ—ನಮ್ಮ ಹೃದಯ ಸೌಂದರ್ಯವನ್ನೇ ಕಾಣುತ್ತೇವೆ. ನಮ್ಮ ಹೃದಯವು ಆನಂದಸಾಗರದಲ್ಲಿ ಈಜುತ್ತಿದ್ದಾಗ, ನಾವು ಸೃಷ್ಟಿ ಸೌಂದರ್ಯವನ್ನು ಸವಿಯುತ್ತಿದ್ದೇವೆ ಎಂದು ಅಂದುಕೊಳ್ಳುತ್ತೇವೆ. ಆದರೆ ಅದು ಸೌಂದರ್ಯವಲ್ಲ. ನಮ್ಮ ಆಶಾವಾದಿತನ. ಆದರೆ ಅದೇ ನಾವು ದುಃಖದಲ್ಲಿದ್ದಾಗ ಸೃಷ್ಟಿಸೌಂದರ್ಯದ ಆಗರವೆಂದು ವರ್ಣಿಸಲ್ಪಟ್ಟ ಪರ್ವತವು ನಮಗೆ ಭಯಾನಕವಾಗಿ ಕಾಣುತ್ತದೆ. ನಿರಾಶೆ ಹುಟ್ಟುವಂತೆ ಮಾಡುತ್ತದೆ. ಮಾನವನ ಅಲ್ಪತೆಯೂ ವಿಶ್ವದ ವಿಶಾಲತೆಯೂ ಮನಶ್ಚಕ್ಷುಗಳಿಗೆ ಗೋಚರವಾಗಿ, ನಮ್ಮನ್ನು ನಾವೇ ತುಚ್ಛವಾಗಿ ಕಾಣುವಂತೆ ಮಾಡುತ್ತದೆ. ಸೃಷ್ಟಿಯು ನಿರ್ಜೀವ ವಸ್ತು. ಅದಕ್ಕೆ ಜೀವ ತುಂಬಿ, ಅದರಲ್ಲಿ ನಮ್ಮ ಸುಖದುಃಖಗಳ ಪಡಿನೆಳಲನ್ನು ಕಾಣುವದು ನಮ್ಮ ಮೌಢ್ಯತನವೇ ಹೊರತಾಗಿ ಮತ್ತೇನು ಇಲ್ಲ.” ಎಂದು ರಾಮು ದೊಡ್ಡ ದೊಡ್ಡ ತತ್ವದ ವಿಚಾರಗಳನ್ನೇ ಹೇಳ ಹತ್ತಿದನು. ಅವನ ಈ ಮಾತುಗಳಿಗೆ ವಿರೋಧವಾಗಿ ನಾನೂ ಏನನ್ನಾದರೂ

ಹೇಳಬಹುದಾಗಿತ್ತು. ಆದರೆ ಅವನ ಈ ತರದ ತತ್ವದ ಮಾತುಗಳಿಗೂ ಮತ್ತು ಪ್ರಸ್ತುತ ಅವನ ದುಃಖಕ್ಕೂ ಏನೋ ಸಂಬಂಧವಿರಬೇಕೆಂದು ವಿಚಾರಿಸಿ– "ನೀನೆನ್ನುವುದು ನಿಜ" ಎನ್ನುವ ರೀತಿಯಲ್ಲಿ ಗೋಣಲ್ಲಾಡಿಸುತ್ತ ನಾನು ಕುಳಿತುಕೊಂಡೆನು. ರಾಮು ತನ್ನ ಭಾಷಣ ಮುಂದುವರೆಸಿದನು.

"ಮನುಷ್ಯನಲ್ಲಿ ವಿಚಾರಶಕ್ತಿ ಇದೆ, ಎನ್ನುವ ಒಂದೇ ದೃಷ್ಟಿಯಿಂದ ನಾವು ಅವನನ್ನು ಸರ್ವ ಪ್ರಾಣಿಗಳಲ್ಲಿ ಶ್ರೇಷ್ಠ ಎಂದು ತಿಳಿದುಕೊಳ್ಳುತ್ತೇವೆ. ಆದರೆ ಆ ವಿಚಾರ ಶಕ್ತಿ ಇರದಿದ್ದರೇ ಅವನು ಉತ್ತಮ ಪ್ರಾಣಿಯಾಗಬಹುದಾಗಿತ್ತು. ಅವನಲ್ಲಿ ವಿಚಾರ ಶಕ್ತಿ ಇದ್ದುದರಿಂದಲೇ ಅವನು ಎಷ್ಟೋ ಪ್ರಾಣಿಗಳಿಗಿಂತ ಕೀಳುಮಟ್ಟಕ್ಕಿಳಿದಿರುವನು, ಎಂಬುದು ನನ್ನ ಜೀವನದ ಅನುಭವ. ಒಂದು ಪ್ರಾಣಿಗೆ ನೀನು ಉಪಕಾರ ಮಾಡಿದರೆ, ಅದು ಆ ಉಪಕಾರವನ್ನು ತೀರಿಸಲು ಸಿಗಬಹುದಾದ ಯಾವದೇ ಪ್ರಸಂಗವನ್ನು ಕಳೆದುಕೊಳ್ಳಲಾರದು. ಆದರೆ ಮಾನವನು ತನ್ನ ಸಾವಿರಾರು ವರುಷಗಳ ನಾಗರಿಕತೆಯಿಂದಲೂ ತನ್ನ ಕ್ರೌರ್ಯದ ಮನೆಯನ್ನು ಸ್ವಲ್ಪವಾದರೂ ಮೊಂಡು ಮಾಡಿಕೊಳ್ಳಲು ಶಕ್ತನಾಗಿಲ್ಲ. ಮಾನವನು---" ಇನ್ನೂ ಅವನು ಹೀಗೆಯೇ ಎಷ್ಟು ಹೊತ್ತಿನ ವರೆಗೆ ಮಾತಾಡುತ್ತಿದ್ದನೋ ಏನೋ! ಆದರೆ ನಾನೇ ಅವನನ್ನು ನಡುವೆಯೇ ತಡೆದು,--

"ಹೌದಪ್ಪಾ– ಮಾನವನು ಕ್ರೂರನಿದ್ದಾನೆ– ಎಂದೇ ಇಟ್ಟುಕೊಳ್ಳೋಣ. ಆದರೆ ನೀನು ಪರೀಕ್ಷೆಗೆ ಕೂಡ್ರದೇ ಇರುವದಕ್ಕೂ ಮತ್ತು ಮಾನವನು ಕ್ರೂರನಿರುವದಕ್ಕೂ ಎಲ್ಲಿಯ ತೋಳ ಕುರಿಮರಿಯ ಸಂಬಂಧ?" ಎಂದು ಕೇಳಿದೆ.

"ಸಂಬಂಧ ಇದೆ ಬಹಳ ಸಂಬಂಧವಿದೆ. ಜಗತ್ತಿನಲ್ಲಿ ಏನೇ ಸಂಭವಿಸಿದರೂ ಅದಕ್ಕೆ ಪೂರ್ವ ಸಂಯೋಜಿತ ಕಾರಣಗಳ ಸಂಬಂಧವಿದ್ದೇ ಇರುತ್ತದೆ."

ನಾನು ಯಾವದೇ ಉತ್ತರ ಕೊಡುವ ಗೋಜಿಗೆ ಹೋಗಲಿಲ್ಲ. ರಾಮು ಮತ್ತೆ ಏನೋ ಧೇನಿಸುತ್ತಾ ಕುಳಿತುಕೊಂಡನು. ಅವನ ಮುಖದ ಮೇಲೆ ಒಮ್ಮೆಲೇ ಒಂದು ವಿಕಟ ನಗೆಯು ಸುಳಿದು ಬಂದಿತು. ಮುಗುಳುನಗೆಯೊಂದಿಗೆ ಅವನೇ ಕೇಳಿದ,--

" ನಾನು ಇಂದು ಈ ಪ್ರಕಾರ ಮಾತಾಡುತ್ತಿರುವದನ್ನು ಕಂಡು ನನಗೆ ಹುಚ್ಚು ಹಿಡಿದಿದೆ, ಎಂದು ಮಾತ್ರ ತಿಳಿದುಕೊಳ್ಳಬೇಡ, ಬಸೂ. ನಾನು ಇಲ್ಲಿಯವರೆಗೆ ಮಾತಾಡಿದುದೆಲ್ಲ ಇಂದು ನನ್ನ ಕಾಯ್ದ ತಲೆಯಲ್ಲಿ ಸುಳಿದ ವಿಚಾರ. ನನಗಾದ ದುಃಖವನ್ನು ಶಮನ ಮಾಡಿಕೊಳ್ಳಲು ಮಾಡಿದ ವಿಫಲ ಪ್ರಯತ್ನ . ತನಗೆ ಸಂಭವಿಸಿದ ದುಃಖಗಳಿಗೆ ಮಹಾ ಮಹಾ ಕಾರಣ ಗಳಿರುತ್ತವೆ. ವಿಶ್ವದ ಮಹಾರೋಧನದೊಡನೆ ತನ್ನದೂ ಒಂದು ಹಸು ಗೂಸಿನ ಆಲಾಪ, ಎಂದು ತಿಳಿದುಕೊಂಡು ಮಾನವನು ತನ್ನಷ್ಟಕ್ಕೆ ತಾನೇ ಸಮಾಧಾನ ಹೇಳಿಕೊಳ್ಳಲು ಪ್ರಯತ್ನಿಸುತ್ತಾನೆ. ಅದರಂತೆ ನಾನೂ ಇಂದು ವಿಚಾರ ಮಾಡಹತ್ತಿದೆ. ಇದೇ ನೋಡು— ಇಂದು ವಿಶ್ವವಿದ್ಯಾಲಯಕ್ಕೆ ನನ್ನಿಂದ ಹಣ ತುಂಬುವದಾಗಲಿಲ್ಲ--ನನ್ನ ಜೀವನ ಹಾಳಾಯಿತು--ಎಂದು ನನಗೆ ದುಃಖ. ಎಲ್ಲ ವಿದ್ಯಾರ್ಥಿಗಳೂ ಹಣ ತುಂಬಿ ಪರೀಕ್ಷೆಗೆ ಕೂಡ್ರುವ ಹೊತ್ತಿನಲ್ಲಿ ನಾನು ಒಬ್ಬನೇ ಮಾತ್ರ ಹಿಂದೆ ಉಳಿಯ ಬೇಕಾಯಿತು- ಎಂದು ನಾನು ವಿಚಾರ ಮಾಡಿದರೆ ನನ್ನ ದುಃಖ ಮತ್ತಿಷ್ಟು ಹೆಚ್ಚುತ್ತದೆ. ಆದರೆ- ನನ್ನಂತೆ- ಎಷ್ಟೋ ಬಡ ಹುಡುಗರು ವಿಶ್ವವಿದ್ಯಾಲಯಕ್ಕೆ ಹಣ ತುಂಬುವದಾ ಗದೆ, ಮನೆಯಲ್ಲಿ ದುಃಖ ಪಡುತ್ತಾ ಕುಳಿತುಕೊಂಡಿರಬಹುದು- ಎಂದು ನಾನು ವಿಚಾರ ಮಾಡಿದರೆ ನನ್ನ ದುಃಖ ಎಷ್ಟೋ ಕಡಿಮೆಯಾಗುತ್ತದೆ. ವಿಶ್ವವೇ ಒಂದು ದುಃಖಸಾಗರವಿರುವಾಗ, ಅದರಲ್ಲಿ ತನ್ನದು ಒಂದು ಹನಿ ಮಾತ್ರ, ಎಂಬ ವಿಚಾರ ಬಂದಾಗ್ಗೆ ಆ ದುಃಖದಲ್ಲಿಯೇ ಸ್ವಲ್ಪ ತೃಪ್ತಿ ಸಿಗುತ್ತದೆ. ಅದಕ್ಕೇ ಇಂದು ನನ್ನಲ್ಲಿ ಇಂತಹ ದೊಡ್ಡ ದೊಡ್ಡ ವಿಚಾರಗಳು ಬಂದದ್ದು."

" ವಿಶ್ವವಿದ್ಯಾಲಯಕ್ಕೆ ತುಂಬಲು ಹಣವಿಲ್ಲೆಂದು ನೀನು ಪರೀಕ್ಷೆಗೆ ಕೂಡ್ರುವದನ್ನು ಬಿಟ್ಟು ಬಿಟ್ಟೆಯಾ ? ಯಾರನ್ನಾದರೂ ಕೇಳಬಾರದಾ ಗಿತ್ತೇ ? ನನ್ನ ಮುಂದೆಯಾದರೂ ಹೇಳಿದ್ದರೆ ನಾನು ಹೇಗಾದರೂ ಮಾಡಿ ರೂಪಾಯಿ ತಂದು ಕೊಡುಬಹುದಾಗಿತ್ತಲ್ಲ! ನೀನು ಇಂದು ಸಾಲೆಗೆ ಬರದೆ ಮನೆಯಲ್ಲಿಯೇ ಉಳಿದದ್ದು ಮಹಾ ತಪ್ಪು."

" ಅದು ನನ್ನ ತಪ್ಪು ಎಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಆ ತಪ್ಪನ್ನು ನಾನು ಮನಸಾ ಎಸಗಲಿಲ್ಲ. ಪರೀಕ್ಷೆಗೆ ಕೂಡ್ರಬೇಕೆಂಬ ಇಚ್ಛೆ ನನಗೂ ಬಹಳ ಇದ್ದಿತು. ಪರೀಕ್ಷೆಗೆ ಕೂತು ಪಾಸಾಗಿ ಯಾವದಾದರೂ

ಒಂದು ನವಕರಿಯನ್ನು ಹಿಡಿಯಬೇಕೆಂಬ ಇಚ್ಛೆ ನನ್ನಲ್ಲಿ ಬಲವಾಗಿದ್ದಿತು. ಯಾಕೆಂದರೆ ನನಗೆ ಮೊದಲಿನಿಂದಲೂ ತಿಳಿದಿತ್ತು- ನಾನು ನವಕರಿಯನ್ನು ಮಾಡದೆ ಗತ್ಯಂತರವೇ ಇಲ್ಲವೆಂದು. ನಿಜಜೀವನದ ಪರಿಚಯ ನನಗೆ ಸ್ವಲ್ಪ ಸ್ವಲ್ಪ ಆಗಹತ್ತಿದನಂತರ, ನಾನು ನನ್ನ ಜೀವನದ ಮಾರ್ಗವನ್ನು ಹುಡುಕಹತ್ತಿದೆ. ನನ್ನ ಮನೆಯವರು ಆಗ ಬಡವರಿರದಿದ್ದರೂ ನಾನು ಮಾತ್ರ ಬಡವನೆಂಬುದು ನನಗೆ ಮೊದಲಿನಿಂದಲೂ ಗೊತ್ತಿದ್ದಿತು.

ನನ್ನ ತಂದೆ ಸಾಯುವ ಕಾಲಕ್ಕೆ ಒಳ್ಳೇ ಶ್ರೀಮಂತನೆಂದು ಎಲ್ಲರಿಗೂ ಪರಿಚಯದವನಾಗಿದ್ದನು. ನಮ್ಮಣ್ಣನೇನು ಅವನು ಸಾಲದಲ್ಲಿ ಬಿಟ್ಟು ಹೋಗಿರದಿದ್ದರೂ ನಾನೊಬ್ಬ ಸಾಲದ ಮಗನೆಂಬ ಭಾವನೆ ನನಗೆ ಚಿಕ್ಕಂದಿನಿಂದಲೂ ಅಂಟಿಕೊಂಡಿತ್ತು. ನಾನು ಹುಟ್ಟಿದ ಎರಡು ಮೂರು ತಿಂಗಳೊಳಗಾಗಿಯೇ ನನ್ನ ತಂದೆ ಅಕಾಲಮೃತ್ಯುಗೀಡಾದನು. ಹಳೆಯ ರೀತಿ ನೀತಿ ಕಂದಾಚಾರಗಳಲ್ಲಿ ನಂಬಿಗೆಯುಳ್ಳ ನನ್ನ ತಾಯಿ ನಾನು ಹುಟ್ಟಿ ನನ್ನ ತಂದೆಯನ್ನು ಕೊಂದೆನೆಂದು ತಿಳಿದುಕೊಂಡು, ನನ್ನನ್ನು ತಾಜ್ಯವಾಗಿ ಕಾಣಹತ್ತಿದಳು. ಅಲ್ಲದೆ. ತನ್ನ ಗಂಡನ ಅಪಮೃತ್ಯುವಿನ ಬಗ್ಗೆ ಶೋಕ ಮಾಡುತ್ತಾ ಕೂಡ್ರುವದೇ ತನ್ನ ಕರ್ತವ್ಯ ಎಂದು ಅವಳುಭಾವಿಸಿದ್ದರಿಂದ, ಅವಳು ಮನೆತನದ ಆಗು ಹೋಗುಗಳ ಕಡೆಗೆ ಸ್ವಲ್ಪೂ ಲಕ್ಷ್ಯವನ್ನೀಯಲಿಲ್ಲ. ನಾನುಅತೀ ಚಿಕ್ಕವನಿದ್ದುದರಿಂದ ಮನೆತನದ ಯಾವವಿಷಯಗಳೂ ನನಗೆ ತಿಳಿಯುತ್ತಿರಲಿಲ್ಲ. ಆದ್ದರಿಂದ ನಮ್ಮ ಅಣ್ಣನೇ ಮನೆಯ ಸರ್ವಾಧಿಕಾರಿಯಾದನು.

ಆದರೆ ಚಿಕ್ಕ ವಯಸ್ಸಿನಲ್ಲಿಯೇ ಸಾಕಷ್ಟು ಹಣವು ಅವನ ಕೈಯಲ್ಲಾಡಹತ್ತಿದ್ದರಿಂದ ಅವನಿಗೆ ದುಷ್ಟರ ಸಂಗತಿ, ದುಷ್ಟ ಚಟಗಳು ಅಂಟಿಕೊಳ್ಳಹತ್ತಿದ್ದವು, ಹೆಂಗಸರಿಗಾಗಿ ಮತ್ತು ಮದ್ಯಕ್ಕಾಗಿ ಹಣವನ್ನು ನೀರಿನಂತೆ ಖರ್ಚು ಮಾಡುತ್ತಿದ್ದನು. ಇದೇ ಪ್ರಕಾರ ಬಹಳ ದಿನ ನಡೆಯಲಿಲ್ಲ. ಕ್ರಮೇಣ ಬಡತನ ನಮ್ಮನ್ನಾವರಿಸಿಕೊಂಡಿತು. ಸಾಲಗಾರರ ತಗಾದೆಗಳೂ ಹೆಚ್ಚಿದವು. ಸಿರಿವಂತಿಕೆ ಹೋಗಿ ಬಡತನಬಂದ ಕಾರಣವೆನ್ನೂ ನನ್ನ ತಾಯಿ ನನ್ನ ಮೇಲೆಯೇ ಹೊರಿಸಿದಳು. ಆದರೆ ಅದರಲ್ಲಿ ಅವಳ ತಪ್ಪೇನು ಇರಲಿಲ್ಲ

ಆಕೆಯ ಅಜ್ಞಾನ ಆಕೆಯ ತಪ್ಪು ತಿಳುವಳಿಕೆಗೆ ಕಾರಣ! ಎಂದು ಅರಿತು ಕೊಂಡ ನಾನು ಆಕೆಯ ಮಾತುಗಳಿಗೆ ಹೆಚ್ಚು ಗಮನ ಕೊಡುತ್ತಿರಲಿಲ್ಲ.

ನಮ್ಮ ಅಣ್ಣನಾದರೂ ಒಂದು ವಿಚಿತ್ರ ಪ್ರಾಣಿ. ಅವನಿಗೆ ಮನೆತನದ ಚಿಂತೆಯೇ ಇಲ್ಲ. ಯಾವಾಗಲೂ ಹೇಗಾದರೂ ಮಾಡಿ, ಯಾರಿಗಾದರೂ ಸುಳ್ಳು ಹೇಳಿ ಹಣ ದೊರಕಿಸಿಕೊಂಡು ತೃಪ್ತಿಪಡೆಯಲು ಹಂಬಲಿಸುವವ. ಮನೆತನದ ಮರ್ಯಾದೆ, ತನ್ನ ಮರ್ಯಾದೆ ಇವು ಯಾವವೂ ಅವನ ವಿಚಾರಕ್ಕೆ ಸಿಲುಕದಂತಹವು. ಆದರೂ ಹಣದ ಕೊರತೆ ಹೆಚ್ಚಾಗುತ್ತಾ ನಡೆದಂತೆ ಅವನ ಮುಖದಮೇಲೆ ಚಿಂತೆಯ ಗೆರೆಗಳು ಮೂಡ ಹತ್ತಿದವು. ತುಂಬು ಯೌವನದಲ್ಲಿಯೇ ಮುದುಕರ ಮುಖದಂತೆ ಕಾಣಿಸುತ್ತಿದ್ದ ಅವನ ಮುಖವನ್ನು ಕಂಡು ನನಗೇ ಕಸಿವಿಸಿಯಾಗುತ್ತಿತ್ತು. ಆದರೂ ದಿನಗಳೆದಂತೆ ನನ್ನಲ್ಲಿ ಒಂದು ಆಶೆ ಅಂಕುರಿಸಹತ್ತಿತು. ನಾನು ಮ್ಯಾಟ್ರಿಕ್ ಪರೀಕ್ಷೆ ಪಾಸಾಗಿ ಯಾವುದಾದರೂ ಒಂದು ಒಳ್ಳೆಯ ನವಕರಿಯನ್ನು ಹಿಡಿದು, ಮತ್ತೆ ಮೊದಲಿನ ಸಿರಿವಂತಿಕೆಯನ್ನು ಗಳಿಸಿದೆನೆಂದರೆ, ಊರವರೇ ನನ್ನನ್ನು ಹೊಗಳಹತ್ತುವರು- ತ್ಯಾಜ್ಯವಾಗಿ ಕಾಣುತ್ತಿರುವ ತಾಯಿಯೇ ನನ್ನನ್ನು ಪ್ರೀತಿಸಬಹುದು. ಆದ್ದರಿಂದಲೇ ನಾನು "ಮ್ಯಾಟ್ರಿಕ್ ಪರೀಕ್ಷೆ ಪಾಸಾಗುವದೇ ನನ್ನ ಗುರಿ'' ಎಂದು ಇಟ್ಟುಕೊಂಡು, ಅದನ್ನು ಸಾಧಿಸುವದಕ್ಕಾಗಿಯೇ ಹಗಲಿರುಳು ಪ್ರಯತ್ನಿಸುತ್ತಿದ್ದೆ.

ಈ ಸಲದ ಮ್ಯಾಟ್ರಿಕ್ ಪರೀಕ್ಷೆಗೆ ಕೂತು ಬಹಳ ಗುಣಗಳನ್ನು ದೊರಕಿಸಿ ಉತ್ತಮ ವರ್ಗದಲ್ಲಿ ಪಾಸಾಗಬೇಕೆಂದು ನಾನು ಹೆಚ್ಚು ಅಭ್ಯಾಸ ಮಾಡಿದ್ದೆನೆಂಬುದು ನಿನಗೆ ಗೊತ್ತೇ ಇದೆ. ಅಲ್ಲದೆ ವಿಶ್ವವಿದ್ಯಾಲಯಕ್ಕೆ ಒಮ್ಮೆಲೇ ಇಪ್ಪತ್ತು ರೂಪಾಯಿಗಳನ್ನು ತುಂಬುವದು ನಮ್ಮ ಅಣ್ಣನಿಗೆ ನೀಗದೆ ಹೋಗಬಹುದೆಂದು, ನಾನು ಸ್ವಲ್ಪ ಸ್ವಲ್ಪ ಹಣವನ್ನು ಕೂಡಿ ಹಾಕುತ್ತಾ ಬಂದಿದ್ದೆನು. ಅದೆಲ್ಲವೂ ಕೂಡಿ ಹದಿನೈದು ರೂಪಾಯಿಯಾಗಿತ್ತು. ಇನ್ನು ಐದು ರೂಪಾಯಿ ಮಾತ್ರ ಕಡಿಮೆ ಬಿದ್ದಿದ್ದವು. ಈ ಐದು ರೂಪಾಯಿಗಳಿಗಾಗಿ ನಾನು ನಮ್ಮ ಅಣ್ಣನನ್ನು ಒಂದು ವಾರದಿಂದಲೂ ಕೇಳುತ್ತಾ ಬಂದಿದ್ದೆನು. ಅವನು " ನಾಳೆ ಕೊಡುತ್ತೇನೆ ನಾಳೆ ಕೊಡುತ್ತೇನೆ '' ಎಂದು ಹೇಳುತ್ತಾ ಬಂದಿದ್ದನು. ಇಂದು ಮುಂಜಾನೆ,

"ಪರೀಕ್ಷೆಕ್ಕ ಇಪ್ಪತ್ತು ರೂಪಾಯಿ ತುಂಬ ಬೇಕು. ನನ್ನ ಕಡೆ ಹದ್ನೈದು ರೂಪಾಯಿ ಅದಾವ. ಇನ್ನೈದು ರೂಪಾಯಿ ಬೇಕಾಗ್ಯಾವ ಕೊಡು" ಎಂದು ನಮ್ಮ ಅಣ್ಣನನ್ನು ಕೇಳಿದೆ.

"ಇವತ್ತ ನನ್ನ ಕಡೆ ಒಂದು ಪೈ ಸಹಾ ಇಲ್ಲಾ. ನಾಳೆ ಎಲ್ಲೆರ ಇಸಗೊಂಡ್ಬಂದು ಕೊಡತೇನಿ" ಎಂದು ಹೇಳಿದ ನಮ್ಮ ಅಣ್ಣಾ.

"ಇವತ್ತು ಕಡೆಯ ದಿನ. ಇವತ್ತು ರೂಪಾಯಿ ತುಂಬದಿದ್ದರ ಪರೀಕ್ಷೆಕ್ಕ ಕೂಡ್ರೊ ಆಶಾ ಬಿಟ್ಟಂಗನ"

"ನೀನು ಸಾಲಿಗೆ ಹೋಗುದರೊಳಗ ಎಲ್ಲರ ಇಸಗೊಂಡ ಬಂದು ಕೊಡತೇನಿ" ಎಂದು ನನ್ನನ್ನು ಸುಮ್ಮನಿರಿಸಿ ಹೊರಗೆ ಹೋದನು.

ನಾನು ಅವನ ದಾರಿಯನ್ನೇ ಕಾಯುತ್ತ ಮನೆಯಲ್ಲಿ ಕುಳಿತು ಕೊಂಡೆನು. ಹನ್ನೆರಡು ಘಂಟೆಯಾದರೂ ಅವನು ಮನೆಗೆ ಬರಲಿಲ್ಲ. ಇನ್ನು ಅವನು ಮನೆಗೆ ಬರುವ ಲಕ್ಷಣವಿಲ್ಲೆಂದು ತಿಳಿದು ಕಡೆಗೆ ನಿನ್ನನ್ನಾದರೂ ಕೇಳಿ ಐದು ರೂಪಾಯಿಗಳನ್ನು ಇಸಿದುಕೊಂಡು ಪರೀಕ್ಷೆಗೆ ತುಂಬ ಬೇಕೆಂದು ಸಿದ್ಧನಾಗ ಹತ್ತಿದ್ದೆ.

ಆದರೆ ಎಂದೂ ಯಾರಿಗೂ ಒಂದು ಪೈ ಸಹ ಸಾಲ ಕೇಳದ ನನಗೆ, ನಿನ್ನ ಹತ್ತಿರ ಸಾಲ ಹೇಗೆ ಎತ್ತಬೇಕೆಂಬುದೇ ದೊಡ್ಡ ಪ್ರಶ್ನೆಯಾಯಿತು. ಅದನ್ನು ವಿಚಾರ ಮಾಡುತ್ತಿದ್ದಂತೆ ನನ್ನ ಅಣ್ಣನ ಮೇಲೆ ಸಿಟ್ಟು ಹೆಚ್ಚುತ್ತ ಬಂದಿತು.

"ನಾನೂ ನನ್ನ ತಂದೆಯ ಮಗನಲ್ಲವೇ? ನನ್ನ ತಂದೆಗಳಿಸಿದ್ದ ಸಂಪತ್ತಿನಲ್ಲಿ ನನಗೂ ಸಮಪಾಲು ಸಿಗಬೇಕಲ್ಲವೇ? ಆದರೆ ಸಮಪಾಲು ಹೋಗಲಿ, ಪರೀಕ್ಷೆಗಾಗಿ ನನಗೆ ಐದುರೂಪಾಯಿ ಸಹ ಸಿಗಬಾರದೆಂದರೆ? ನಾನಾವ ಪಾಪದ ಮಗು ಎಂದು ಈ ರೀತಿ ದುಃಖಕ್ಕೊಳಗಾಗಬೇಕು? ನನ್ನ ಪಾಲಿಗೆ ಬರಬಹುದಾದ ಸಂಪತ್ತನ್ನೂ ಸಹ ತನ್ನ ಚೈನಿಗಾಗಿ ಹಾಳು ಮಾಡಲು ನಮ್ಮ ಅಣ್ಣನಿಗೆ ಯಾವ ಅಧಿಕಾರ ಇದ್ದಿತು? ನನ್ನನ್ನು ಬಡವರಲ್ಲಿಯೇ ಕಡು ಬಡವನನ್ನಾಗಿ ಮಾಡಿದ ಇವನು ನಮ್ಮ ಅಣ್ಣನೇ? ಶುದ್ಧ ವೈರಿ ನನ್ನನ್ನು ಈ ಪ್ರಕಾರ ದುಃಖಕ್ಕೀಡು ಮಾಡುವದಕ್ಕಾಗಿಯೇ ಹುಟ್ಟಿಬಂದಿರುವನೋ ಏನೋ?" ಎಂದು, ಈ ಪ್ರಕಾರ ನಾನು ವಿಚಾರಿಸುತ್ತಿದ್ದಂತೆಯೇ ನಮ್ಮ ಅಣ್ಣನೂ ಬಂದನು. ಅವನ ಒಣಗಿದ ಮುಖವೇ ಹೇಳುತ್ತಿತ್ತು, ಅವ

ನಿಗೆ ರೂಪಾಯಿಗಳು ದೊರೆತಿಲ್ಲವೆಂದು. ಆದರೂ ಸಹ ನಾನೇ ವ್ಯಂಗ್ಯವಾಗಿ ಕೇಳಿದೆ. "ರೂಪಾಯಿ ತಂದೆನಪಾ? "

" ಇಲ್ಲ ಯಾರೂ ಕೊಡಲಿಲ್ಲ. "

" ಯಾರಾದರೂ ಯಾಕ ಕೊಡಬೇಕ ನಿನಗ ರೂಪಾಯಿ? ಕೊಡಲಿಕ್ಕೆ ಅವರ ಕಡೆಗೆ ಜಾಸ್ತಿ ಆಗ್ಯಾವನು? ಹತ್ತಿರ ರೂಪಾಯಿ ಇದ್ದಾಗ ಶೆರೆ ಸಿಂದಿ ಕುಡುದು ಹಾಳು ಮಾಡಿ ಚೈನಿ ಹೊಡೆಯೋದು,ಇಂತಹ ಹೊತ್ತು ಬಂದಾಗ ಮಂದಿ ಹತ್ತರ ರೂಪಾಯಿ ಕೇಳಲಿಕ್ಕೆ ಹೋಗೂದು, ಅವರ್‍ಯಾಕ ಕೊಡಲಿಕ್ಕೆ ಹೋಗ್ತಾರ ರೂಪಾಯಿನ? ನೀನು ಮುಂದೀಕಡೆಗೆ ಕೇಳೂ ಪರಿಸ್ಥಿತಿ ಯಾದರೂ ಎಲ್ಲಿ ಬರತಿತ್ತು ಹಿಂಗ ತಂದಿಗಳಿಸಿದ್ದೆಲ್ಲಾ ದುಂದು ಮಾಡದಿದ್ದರೆ? ದಿನಾ ನೂರಾರು ರೂಪಾಯಿ ಖರ್ಚು ಮಾಡೂಮುಂದ ನಿನಗ ಒಬ್ಬವ ತಮ್ಮ ಅದಾನs ಅನ್ನೂ ಕಲ್ಪನಾನಾದರೂ ಇತ್ತನು ನಿನಗೆ? ನನ್ನ ತಂದೆ ಗಳಿಸಿದ ಸಂಪತ್ತಿನಲ್ಲಿ ನನ್ನ ಪರೀಕ್ಷೆಯಸಲುವಾಗಿ ಐದು ರೂಪಾಯಿಸಹ ಸಿಗದಂತೆ ಮಾಡಿರುವಿ; ನೀನು ನನ್ನ ಅಣ್ಣಾ ಎಂದು ಯಾವ ಬಾಯಿಯಿಂದ ಕರೆಯುಬೇಕೋ ನನಗೆ ತಿಳಿಯದು; ನೀನು ನನ್ನ ಅಣ್ಣಾ ಅಲ್ಲವೇ ಅಲ್ಲ;ನನ ಜನ್ಮವನ್ನೇ ಹಾಳುಮಾಡಲು ಹುಟ್ಟಿ ಬಂದ ಆಜನ್ಮವೈರಿ ! "

ನಾನು ಇದೇ ಪ್ರಕಾರ ಎಷ್ಟೋ ಹೊತ್ತಿನವರೆಗೆ ಒದರಾಡಿದರೂ ನಮ್ಮ ಅಣ್ಣಮಾತ್ರ ಯಾವ ಉತ್ತರವನ್ನೂ ಕೊಡಲಿಲ್ಲ.ಅವನು ಕೆಳಗೆ ಮುಖಮಾಡಿಕೊಂಡು ಸುಮ್ಮನೇ ಕುಳಿತು ಬಿಟ್ಟಿದ್ದನು, ನಾನು ಈ ಪ್ರಕಾರ ಅವನಿಗೆ ಎಂದೂ ಮಾತಾಡಿದ್ದಿಲ್ಲ. ಅವನು ಏನೂ ಮಾತಾಡದೆ ಸುಮ್ಮನೇ ಕುಳಿತಿರುವದನ್ನು ಕಂಡು ನನಗೇ ಕಸವಿಸಿಯಾಯಿತು. ಎಲ್ಲಿ ನಾನಂದ ಮಾತುಗಳನ್ನು ಮನಸ್ಸಿಗೆಹಚ್ಚಿಕೊಳ್ಳುವನೋ?ಎಂದು ಭಯವೂ ಆಯಿತು. "ನಾನು ಈ ಪ್ರಕಾರ ಮಾತಾಡಬಾರದಿತ್ತು!" ಎಂದು ನನ್ನಷ್ಟಕ್ಕೆ ನಾನೆ ಅಂದು ಕೊಂಡೆ. ಎಷ್ಟೋ ಹೊತ್ತಿನ ವರೆಗೆ ಇಬ್ಬರೂ ಮೌನವಾಗಿಯೇ ಕುಳಿತು ಕೊಂಡಿದ್ದೆವು.

" ನಿನ್ನ ಕಡೆ ಹದ್ನೈದು ರೂಪಾಯಿ ಅದಾವಂತಿಯಲ್ಲಾ,ಅವನ್ನ ತಾ ಇಲ್ಲೆ. ಆ ಕಾಳಿನ ಅಂಗಡಿ ಸಾವಕಾರರಿಗೆ ನಾನು ಹದ್ನೈದು ರೂಪಾಯಿ ಬಡ್ಡಿ ಕೊಡೂದೈತಿ; ಅವು ಹದ್ನೈದು ರೂಪಾಯಿ ಕೊಟ್ಟು ಮತ್ತ ಇಪ್ಪತ್ತು

ರೂಪಾಯಿ ಸಾಲಾ ಇಸಗೊಂಡು ಬರತೇನಿ" ಎಂದ ನಮ್ಮ ಅಣ್ಣ

"ಆ ಹದ್ನೈದು ರೂಪಾಯಿ ಇಸಗೊಂಡು ಮತ್ತ ಸಾಲಾ ಕೊಡೂದಿಲ್ಲಾ ಹೋಗು, ಅಂತ್ಹೇಳಿ ಬಿಟ್ರ ಏನ್ರೀ?"

"ಹಂಗೇನ ಅವರು ಅನ್ನೂದಿಲ್ಲಾ. ಬಾಳ ಛಲೋ ಅದಾರ. ಅಲ್ಲದ ಬಡ್ಡೀ ಕೊಟ್ಟಮ್ಯಾಲೆ ಖುಶಿ ಆಗಿರತಾರ. ಹ್ಯಾಂಗರೆ ಮಾಡಿ ಅವರ ಕಾಲಾದರೂ ಬಿದ್ದು ನಿನಗ ಇಪ್ಪತ್ತು ರೂಪಾಯಿ ತಂದು ಕೊಡತೇನಿ" ಎಂದ ನಮ್ಮ ಅಣ್ಣ ನಂಬಿಗೆ ಹುಟ್ಟುವಂತೆ.

ಅಲ್ಲದೆ ಅವನಿಗೆ ಕಟುನುಡಿಗಳನ್ನಾಡಿ ಅವನ ಮನಸನ್ನು ನೋಯಿಸಿದ ನಾನು ರೂಪಾಯಿಗಳನ್ನು ಕೊಡಲಿಕ್ಕೆ ಹಿಂಜರಿಯುವದು ತಪ್ಪು ಎಂದು ಭಾವಿಸಿದೆ. ಆದ್ದರಿಂದ,

"ಈಗ ಆಗಲೇ ಮೂರು ಘಂಟೆ ಆಗೇತಿ. ಇನ್ನೊಂದು ಅರ್ಧಾ ಘಂಟೆಯೊಳಗ ಬರಬೇಕು, ನೋಡು". ಎಂದು ಅವನಿಗೆ ಎಚ್ಚರ ಕೊಟ್ಟು ನನ್ನಲ್ಲಿದ್ದ ಹದಿನೈದು ರೂಪಾಯಿಗಳನ್ನು ಅವನ ಕೈಯಲ್ಲಿಟ್ಟೆ. ಅವನು ಅವನ್ನು ತಗೆದುಕೊಂಡು ಹೊರಟು ಹೋದನು. ಮತ್ತೆ ನಾನು ಅವನ ದಾರಿಯನ್ನೇ ಕಾಯುತ್ತಾ ಗಡಿಯಾರದ ಮುಂದೆ ಕುಳಿತು ಕೊಂಡೆ.

ಗಡಿಯಾರದಲ್ಲಿಯ ಮುಳ್ಳು ಐದು ಘಂಟೆಯನ್ನು ಸಮೀಪಿಸುತ್ತಿದ್ದಂತೆ ನನ್ನ ಕಣ್ಣೊಳಗೆ ನೀರೂ ಅಂಚುಮಟ ತುಂಬ ಹತ್ತಿದವು. ಇಂದು ಗಡಿಯಾರವು 'ಥಣ್ ಥಣ್" ಎಂದು ಐದು ಘಂಟೆಯನ್ನು ಬಾರಿಸುತ್ತಲೇ ನನ್ನ ಜೀವನದ ಎಲ್ಲ ಕನಸುಗಳೂ ಒಡೆದು ಚೂರುಚೂರಾದವು. ನನ್ನ ಬಾಳು ವ್ಯರ್ಥವಾಯಿತು" ಎನ್ನುತ್ತಾ ರಾಮು ಬಿಕ್ಕಿ ಬಿಕ್ಕಿ ಅಳಹತ್ತಿದನು. ನನಗೂ ಅತೀವ ದುಃಖವಾಯಿತು. ಅವನನ್ನು ಹಾಗೂ ಹೀಗೂ ಸಮಾಧಾನ ಪಡಿಸಿ ಅವನನ್ನು ಮನೆಯ ಕಡೆಗೆ ಕರೆದುಕೊಂಡು ಹೊರಟೆ.

ಆಗಲೇ ಹೆಚ್ಚು ಕತ್ತಲವಾಗಿದ್ದರಿಂದ ನಾವು ತೀವ್ರ ಗತಿಯಿಂದಲೇ ನಡೆದಿದ್ದೆವು. ಊರ ಮುಂದಿನ ಬಾವಿಯ ಕಟ್ಟೆಯ ಮೇಲೆ ನೆರೆದಿದ್ದ ಜನಸಮೂಹವು ನಮ್ಮ ಲಕ್ಷ್ಯವನ್ನು ಸೆಳೆಯಿತು. ಏನಾಗಿದೆ ನೋಡಬೇಕೆಂದು ನಾವು ಅತ್ತ ಕಡೆಗೆ ಹೋದೆವು. ಅಲ್ಲಿ ನಿಂತ ಒಬ್ಬನನ್ನು ನಾನು ಕೇಳಿದೆ-ಏನಾಗಿದೆ? ಎಂದು.

"ಒಬ್ಬ ಕುಡುಕ ಕುಡುದ ನಿಶೇದಾಗ ಬಾವ್ಯಾಗ ಬಿದ್ದಾನ. ಅವನ್ನ ಹೊಂಗ ತಗ್ಯಾಕ ಹತ್ಯಾರ" ಎಂದು ಅವನು ಉತ್ತರ ಕೊಟ್ಟ.

ಅಷ್ಟರಲ್ಲಿ ಬಾವಿಯಲ್ಲಿ ಬಿದ್ದ ಆ ಕುಡುಕನನ್ನು ತೊಟ್ಟಿಲುವಲ್ಲಿ ಮೇಲೆಳೆದು ದಂಡೆಯಮೇಲೆ ಹಾಕಿದರು.ಅವನು ಬಾವಿಯಲ್ಲಿ ಬಿದ್ದು ಬಹಳ ಹೊತ್ತಾಗಿರದಿದ್ದರೂ ತಲೆಗೆ ಬಲವಾದ ಏಟು ಬಿದ್ದದ್ದರಿಂದ, ಅವನು ಮೂರ್ಛೆ ಹೋಗಿದ್ದನು.ಮುಖದಮೇಲೆ ರಕ್ತವು ಹರಿದು ಬರುತ್ತಿತ್ತು.ಅಲ್ಲದೆ ಅವನ ಬಾಯಿಯಿಂದ ಹೊರಟ ಉಸಿರು ಮದ್ಯದ ನಾತದಿಂದ ಕೂಡಿದ್ದುದರಿಂದ ಅಲ್ಲಿ ನಿಂತವರೆಲ್ಲ ಮೂಗು ಮುಚ್ಚಿಕೊಳ್ಳುವಂತಾಗಿತ್ತು.ಇಷ್ಟೆಲ್ಲ ನೋಡುತ್ತ ನನ್ನೊಡನೆ ನಿಂತಿದ್ದ ರಾಮು ಒಮ್ಮೆಲೇ ಮುಂದೆ ಧಾವಿಸಿ, "ಇವನು ನಮ್ಮ ಅಣ್ಣ!" ಎಂದು ಜೋರಾಗಿ ಒದರಿ ಅವನ ತಲೆಯನ್ನು ತನ್ನ ತೊಡೆಯ ಮೇಲೆ ತಗೆದುಕೊಂಡು, ಅವನ ತಲೆಯಿಂದ ಹರಿದು ಬರುತ್ತಿದ್ದ ರಕ್ತವನ್ನು ತಡೆಯುವದಕ್ಕಾಗಿ ಪ್ರಯತ್ನಮಾಡಹತಿದನು. ಎಲ್ಲರೂ ಆಶ್ಚರ್ಯದಿಂದ ರಾಮುನನ್ನೇ ನೋಡಹತ್ತಿದರು.

—ಹೂಬಳ್ಳಿ ಹೂಗಾರ

ನಾಲ್ಕನೆಯ ಎಸಳು

# ಅಲ್ಲಾಸಾಬ

ಇನ್ನೂ ಸೂರ್ಯೋದಯವಾಗಿರದಿದ್ದರೂ ಪ್ರಕಾಶ ಎಲ್ಲೆಡೆಗೆ ಹರಡಿದ್ದಿತು. ಆಗಲೇ ಒಕ್ಕಲಿಗರೆದ್ದು ಎತ್ತುಗಳನ್ನು ಹೊಡೆದುಕೊಂಡು ತಮ್ಮ ತಮ್ಮ ಹೊಲಕ್ಕೆ ಹೋಗಹತ್ತಿದ್ದರು. ಹೆಂಗಳೆಯರು ತುಂಬಿದ ಕೊಡಗಳನ್ನು ಹೊತ್ತುಕೊಂಡು ಏನೇನೋ ಪಿಸು ಪಿಸು ಮಾತನಾಡುತ್ತಾ ಮನೆಯ ದಾರಿ ಹಿಡಿದಿದ್ದರು. ಕಾಯಿಪಲ್ಲೆಗಳನ್ನು ಮಾರಲು ಬಂದ ಲಮಾಣಿಯ ಎತ್ತರ ಸ್ವರವು ಓಣಿಗೆಲ್ಲ ಕೇಳಿಸುತ್ತಿತ್ತು. ಮಗ್ಗಲು ಓಣಿಯಲ್ಲಿ ಇದ್ದ ಹನಮಂತದೇವರ ಗುಡಿಯಲ್ಲಿಯ ಝಾಗಟೆಗಳ ಶಬ್ದವು ತಾನತಾನವಾಗಿ ಬರಹತ್ತಿದ್ದಿತು. ಹಿತ್ತಲದಲ್ಲಿಯ ಬೇವಿನಮರದ ಟೊಂಗೆಯ ಮೇಲೆ

ಕುಳಿತ ಕಾಗೆಯನ್ನು ಕಂಡು ನಾಯಿಯು ಒಂದೇಸವನೆ ಬೊಗಳಹತ್ತಿತು. ಇವೆಲ್ಲವುಗಳ ಕಡೆಗೆ ಸ್ವಲ್ಪೂ ಲಕ್ಷ್ಯಕೊಡದೆ ತನ್ನ ಚಿಕ್ಕ ಮಗನಾದ ಹುಸೇನಿಯ ಮೇಲೆ ತಾನೇ ಕಟ್ಟಿದ ಹಾಡುಗಳನ್ನು ಹಾಡುತ್ತಾ ಬೀಸುವ ಕಲ್ಲನ್ನು ತಿರುವಹತ್ತಿದ್ದಳು ಫಾತವ್ವ. ಆದರೆ ಜಗತ್ತು, ಕಣ್ಣು ಕಟ್ಟಲ್ಪಟ್ಟ ಗಾಣದೆತ್ತಿನಂತೆ ಹೆಜ್ಜೆಯಲ್ಲಿಯೇ ಹೆಜ್ಜೆಯನ್ನಿಕ್ಕುತ್ತ ತಿರಗಹತ್ತಿದರೂ, ಅಲ್ಲಿಯೇ ಹಾಸಿಗೆಯಲ್ಲಿ ಪಿಳಿಪಿಳಿ ಕಣ್ಣುಬಿಡುತ್ತ ಮಲಗಿಕೊಂಡಿದ್ದ ಅಲ್ಲಾಸಾಬನಿಗೆ ಮಾತ್ರ ಇದೆಲ್ಲವೂ ವಿಚಿತ್ರವಾಗಿ ಕಂಡಿತು. ಅದೇ ಊರಲ್ಲಿ ಅದೇ ಮನೆಯಲ್ಲಿ ಅವನು ಇಪ್ಪತ್ತು ವರ್ಷಗಳಿಂದ ವಾಸವಾಗಿದ್ದರೂ ಈ ತರದ ದ್ರುಶ್ಯಗಳು, ಇಷ್ಟು ಮನಮೋಹಕವಾಗಿ ಅವನ ದ್ರುಷ್ಟಿಗೆ ಒಮ್ಮೆಯೂ ಬಿದ್ದಿರಲಿಲ್ಲ. ಬಿದ್ದರೂ ಅವುಗಳನ್ನು ಇಂದು ನೋಡಿದ ದ್ರುಷ್ಟಿಯಿಂದ ಅವನು ಒಮ್ಮೆಯೂ ನೋಡಿರಲಿಲ್ಲ. ತನ್ನ ತಾಯಿ ತನ್ನ ತಮ್ಮನ ಮೇಲೆ ಕಟ್ಟಿದ ಹಾಡುಗಳನ್ನು ಹಾಟುವದು ಕೇಳಿದ ಮೇಲಂತೂ ಅವನಿಗೆ ಹೇಳತೀರದಷ್ಟು ಆಶ್ಚರ್ಯವಾಯಿತು. “ಪ್ರತಿದಿನವೂ ಜಗತ್ತು ಹೀಗೆಯೇ ಇರುವದೇ?” ಎಂದು ಅವನು ತನ್ನಷ್ಟಕ್ಕೆ ತಾನೇ ಪ್ರಶ್ನಿಸಿಕೊಂಡಿರಬೇಕು.

•

ಅಲ್ಲಾಸಾಬನು ಇನ್ನೂ ಹತ್ತು ವರುಷದವನಿದ್ದಾಗ ಆ ಊರಿಗೆ ಬಂದಿದ್ದರೂ ಅವನಿಗೆ ಗೊತ್ತಾಗಿದ್ದುದು ತನ್ನ ಮನೆ ಮತ್ತು ತನ್ನ ಧನಿಯರ ಮನೆ, ಪರಿಚಯವಾಗಿದ್ದುದು ತನ್ನ ತಮ್ಮ, ತಾಯಿ ಮತ್ತು ಧನಿಯರ ಸಂಗಡ. ಅವನಿಗೆ ತನ್ನ ಕೆಲಸವಾಯಿತು, ತಾನಾಯಿತು. ಉಳಿದ ಜಂಜಾಟಗಳು ಅವನ ಮನಸ್ಸನ್ನು ಹಿಡಿಯುತ್ತಿರಲಿಲ್ಲ. ಪ್ರತಿದಿನ ಇನ್ನೂ ನಸುಕು ಇರುವಾಗ್ಗೆಯೇ ಎದ್ದು ತನ್ನ ಧನಿಯರ ಮನೆಗೆ ಹೋಗಬೇಕು-ದನಗಳ ಚಾಕರಿಯನ್ನು ಮಾಡಿ ಕಸವನ್ನು ಬಳೆದು, ಎತ್ತುಗಳನ್ನು ಹೊಡೆದುಕೊಂಡು ಹೊಲಕ್ಕೆ ಹೋಗಬೇಕು. ಹೊಲದಲ್ಲಿ ಎತ್ತುಗಳಂತೆ ತಾನೂ ದುಡಿಯಬೇಕು-ಮತ್ತು ಈ ಚಾಕರಿಯಿಂದ ಬಂದ ಸಂಬಳವನ್ನೆಲ್ಲ ವಾರದ ಅಂತ್ಯದಲ್ಲಿ ತನ್ನ ತಾಯಿಯ ಕೈಯಲ್ಲಿ ಕೊಟ್ಟು ತನ್ನ ಜವಾಬುದಾರಿಯನ್ನು ತಪ್ಪಿಸಿಕೊಳ್ಳಬೇಕು. ಇಷ್ಟೇ ಅವನಿಗೆ ಗೊತ್ತು. ಇಪ್ಪತ್ತು ವರುಷಗಳಿಂದಲೂ ಅವನು ಅದನ್ನೇ ಮಾಡುತ್ತ ಬಂದಿದಾನೆ.

ಆದರೆ ಈ ಇಪ್ಪತ್ತು ವರುಷಗಳ ದೀರ್ಘಾವಧಿಯಲ್ಲಿ ನಡುವೆ ತನ್ನ ಮದುವೆಗೆಂದು ಒಂದು ವಾರ ಕೆಲಸವನ್ನು ಬಿಟ್ಟಿದ್ದೂ ಉಂಟು. ಮದುಮಗ ನಂತೆ ಅವನೂ ಹೂವಿನ ಹಾರವನ್ನು ಹಾಕಿಕೊಂಡು ಕುದುರೆಯ ಮೇಲೆ ಕೂತುಕೊಂಡು ಮೆರವಣಿಗೆ ಎಂದು ಊರೆಲ್ಲ ಸುತ್ತಾಡಿ ಬಂದದ್ದೂ ನಿಜ. ಲಗ್ನವಾದ ದಿನವೇ ಅವನೊಂದಿಗೆ ಅವನ ಮನೆಗೆ ಒಬ್ಬ ಹೆಣ್ಣುಮಗಳು ಬಂದು ಒಂದು ವಾರದ ವರೆಗೆ ಅವನೊಡನೆ ಅವನ ಹೆಂಡತಿಯಂತೆ ನಡೆದು ಕೊಂಡದ್ದೂ ಉಂಟು. ಆದರೆ ಇದೆಲ್ಲ ಒಂದು ಕನಸಿನಂತೆ ಕಾಣಿಸಿಕೊಂಡು ಮಾಯವಾಗಿಹೋಯ್ತು. ಲಗ್ನವಾದ ಮೇಲೆ ಒಂದುವಾರದ ನಂತರ ತವರು ಮನೆಗೆ ಎಂದು ಹೋದ ಅವನ ಹೆಂಡತಿಯು ತಿರುಗಿ ಅವನ ಮನೆಗೆ ಬರಲೇ ಇಲ್ಲ. ಖಾಯಿಲೆಯೆಂದು ನಾಲ್ಕೈದು ತಿಂಗಳು ತವರು ಮನೆಯಲ್ಲಿಯೇ ಮಲಗಿ ಒಂದು ದಿನ ಕಾಲವಾಗಿ ಹೋದಳು. ಅವನ ಹೆಂಡತಿ ಸತ್ತ ಸುದ್ದಿ ಬಂದು ಅವನಿಗೆ ತಲುಪಿದರೂ ಅದರಿಂದ ಅವನ ಮನಸ್ಸಿನ ಮೇಲೆ ಯಾವ ಪರಿಣಾಮವಾದಂತಿರಲಿಲ್ಲ. ಆದರೆ ಅವನ ಮನಸ್ಸಿನ ಮೇಲೆ ಪರಿಣಾಮ ಮಾಡಿದುದು ತನ್ನ ಲಗ್ನಕ್ಕೆಂದು ಧನಿಯರ ಹತ್ತಿರ ತಂದ ಐದುನೂರು ರೂಪಾಯಿಗಳ ಸಾಲ ಮಾತ್ರ. ಅದನ್ನು ತೀರಿಸುವದರಲ್ಲಿಯೇ ಅವನು ಮನಸ್ಸುಹಾಕಿ ಮತ್ತಷ್ಟು ಕಾಳಜಿಪೂರ್ವಕವಾಗಿ ದುಡಿಯ ಹತ್ತಿದ. ಮತ್ತೆ ಸಾಲಮಾಡಿ ಮದುವೆ ಮಾಡಿಕೊಳ್ಳುವ ಸಾಹಸಕ್ಕೆ ಮಾತ್ರ ಯಾರು ಮನ ವೊಲಿಸಲು ಪ್ರಯತ್ನ ಮಾಡಿದರೂ ಬೀಳಲಿಲ್ಲ.

ಯಾವ ಸಂಗತಿಯೂ ಅಲ್ಲಾಸಾಬನ ಮನಸ್ಸನ್ನು ಹಿಡಿಯದಿದ್ದರೂ ಒಂದೇ ಒಂದು ಆಶೆಯು ಮಾತ್ರ ಅವನ ಜೀವನದ ಸರ್ವಸ್ವವಾಗಿತ್ತು. ಆ ಒಂದು ಆಶೆಗಾಗಿಯೇ ಅವನು ತನ್ನ ಇಡೀ ಜೀವನವನ್ನು ಮೀಸಲಾಗಿರಿಸಿ ದಂತಿತ್ತು. ಅದೇನಂದರೆ ತನ್ನ ತಮ್ಮನನ್ನು ಸಾಲೆ ಕಲಿಸಿ, ತನ್ನ ಚಿಕ್ಕ ಧನಿ ಯರು ಹೇಗೆ ಸಾಲಿ ಕಲಿತು ಸಾಹೇಬರಾಗಿ ನೂರಾರು ರೂಪಾಯಿ ಸಂಬಳ ತರುತ್ತಿರುವರೋ, ಹಾಗೇ ಅವನನ್ನೂ ಮಾಡಬೇಕೆಂಬುದೇ ಅವನ ಮಹ ತ್ವಾಕಾಂಕ್ಷೆ. ಅದಕ್ಕೆಂದೇ ಅವನು ತನ್ನ ದುಡಿಮೆಯ ಬಹುಭಾಗವನ್ನು ಹುಬ್ಬಳ್ಳಿಯಲ್ಲಿ ಸಾಲೆ ಕಲಿಯುತ್ತಿದ್ದ ತನ್ನ ತಮ್ಮನಿಗೆ ಕಳಿಸಿ ಕೊಡುತ್ತಿ ದ್ದನು. ಹುಸೇನಿಯೂ ತನ್ನ ಅಣ್ಣನ ಆಸೆಯನ್ನು ಸಫಲಗೊಳಿಸುವದುಸಾಧ್ಯ

ವೆನ್ನುವಷ್ಟರವುಟ್ಲಿಗೆ ಪ್ರತಿವರುಷ ಪಾಸಾಗುತ್ತ ಮ್ಯಾಟ್ರಿಕ ಪರೀಕ್ಷೆಗೆ ಕೂಡ್ರುವ ಈಯತ್ತೆಯುವರೆಗೆ ಬಂದಿದ್ದನು. ಆಗಂತೂ ಅಲ್ಲಾಸಾಬನ ಆನಂದ ಹೇಳತೀರದಷ್ಟು. ಕೈಲಾಸವು ಕೈಗೆ ಬರುವದು ಇನ್ನೇನೂ ದೂರ ವಿಲ್ಲವೆಂದವನಿಗನಿಸಿರಬೇಕು. ಆ ಉಬ್ಬಿನಲ್ಲಿ ಅವನಿಗೆ ಎಷ್ಟು ದುಡಿದರೂ ಬೇಸರವೇ ಇಲ್ಲ. ಪರೀಕ್ಷೆಯೂ ಸಮೀಪಿಸಿತು. ಅಲ್ಲಾಸಾಬ ತನ್ನ ಧನಿಯರ ಕಾಲುಬಿದ್ದು ಐವತ್ತು ರೂಪಾಯಿಗಳನ್ನು ಸಾಲವಾಗಿ ತಂದು ತನ್ನ ತಮ್ಮನ ಕೈಯಲ್ಲಿ ಕೊಟ್ಟು ಹರಿಸಿ, ಪರೀಕ್ಷೆಗೆ ಕಳಿಸಿಕೊಟ್ಟನು.

ಪರೀಕ್ಷೆಯನ್ನು ಮುಗಿಸಿಕೊಂಡು ಹುಸೇನಿಯು ತಿರುಗಿ ಊರಿಗೆ ಬಂದನು. ಪ್ರಶ್ನೆಗಳೆಲ್ಲ ಬಹಳ ಹಗುರಾಗಿಯೇ ಇದ್ದವು. ತಾನು ಪರೀಕ್ಷೆಯಲ್ಲಿ ಹೆಚ್ಚು ಗುಣಗಳನ್ನು ದೊರಕಿಸಿಕೊಂಡು ಪಾಸಾಗಿಯೇ ತೀರುವೆನೆಂಬ ಭರವಸೆಯನ್ನೂ ತೋರಿಸಿಕೊಂಡ. ಎಲ್ಲರೂ ಪರೀಕ್ಷೆಯ ಫಲಿತಾಂಶವು ಗೊತ್ತಾಗುವ ದಾರಿಯನ್ನೇ ನಿರೀಕ್ಷಿಸಹತ್ತಿದರು.

"ನಾಳೆ ಪರೀಕ್ಷೆ ಪಾಸು-ನಪಾಸು ಗೊತ್ತಾಗ್ತೈತಿ" ಎಂದ ಹುಸೇನಿ ಒಂದು ದಿನ ಅಣ್ಣನಿಗೆ.

"ನಾಳೆ ಗೊತ್ತಾಗ್ತೈತೇ? ಛಲೋ ಆತು ಬಿಡು. ಈ ಪರೀಕ್ಷೆ ಪಾಸ ಆಗುತ್ತಲೇ ಯಾವ ನೌಕರಿ ಹತ್ತೈತಿಪಾ?"

"ನವಕರಿಗೇನ ಕಡಿಮಿ! ಮ್ಯಾಟ್ರಿಕ ಪಾಸಾದವರ್‍ನ ಗವ್ಹರ್ಮೆಂಟದವರೇ ನೂರ ರೂಪಾಯಿ ಕೆಲಸದಮ್ಯಾಲೆ ತಾವಾಗಲೇ ತಗೋಳಾಕ ಹತ್ಯಾರ"

"ಹಂಗರ ಪರೀಕ್ಷೆ ಪಾಸಾಗುತ್ತಲೇ ತಿಂಗಳಾ ನೂರು ರೂಪಾಯಿ ಸಂಬಳ ಸುರು ಆಗ್ತೈತಿ?"

"ಓಹೋ-ಅದರಾಗೇನ ಸಂಶಯ!"

ಅಲ್ಲಾಸಾಬನ ಆನಂದವು ಹೃದಯ ತುಂಬಿ ಹೆಚ್ಚಾಗಿ ಮುಗುಳು ನಗೆಯ ರೂಪವಾಗಿ ಹೊರಚೆಲ್ಲಹತ್ತಿತು. ಆದರೆ ಹುಸೇನಿಯ ಮುಖದ ಮೇಲೆ ಮಾತ್ರ ಯಾವ ಭಾವನೆಗಳೂ ವ್ಯಕ್ತವಾಗುತ್ತಿರಲಿಲ್ಲ.

"ಆದರ-ಇವತ್ತ ನನಗ ಒಂದ ಹತ್ತ ರೂಪಾಯಿ ಬೇಕಾಗ್ಯಾವ" ಎಂದ ಮತ್ತೆ ಹುಸೇನಿ ಕಾಲ ಹೆಬ್ಬೆರಳಿನಿಂದ ನೆಲದಮೇಲೆ '೧೦' ಅನ್ನುವ ಅಂಕೆಯನ್ನು ತಾನೇ ಬರೆಯುವುದನ್ನು ನೋಡುತ್ತ.

"ಎಷ್ಟ?" ಅಲ್ಲಾಸಾಬ ಸಹಜ ಪ್ರಶ್ನಿ ಹಾಕಿದ.

"ಇವತ್ತ ಹುಬ್ಬಳ್ಳಿಗೆ ಹೋಗಬೇಕಾಗೇತಿ. ಅಲ್ಲೆ ಇವತ್ತs ಗೊತ್ತಾಗ್ತೈತಿ ಪಾಸಾಗಿದ್ದು"

"ವರ್ತಮಾನ ಪತ್ರದಾಗ ಇಲ್ಲೇ ಹ್ಯಾಂಗೂ ಗೊತ್ತ ಆಗೇ ಆಗ್ತೈತಿ ಅಂತಿದ್ದೆಲ್ಲಾ? ಸುಳ್ಳ ಯಾಕ ರೂಪಾಯಿ ಖರ್ಚುಮಾಡ್ತಿ ಕೆಲ್ಸ ಇಲ್ಲದ?"

"ಮಾಸ್ತರರಿಗೆ ಅಟು ಭೆಟ್ಟಿ ಆಗಬೇಕು. ಮತ್ತ ಪಾಸಾಗಿದ್ದರೆ ಸರ್ಟಿಫಿಕೇಟು ಇಸಕೊಂಡ ಬರಬೇಕು."

ಇದಕ್ಕೆ ಎದುರಾಗಿ ಅಲ್ಲಾಸಾಬ ಏನನ್ನೂ ಹೇಳಲಿಲ್ಲ. ತಾನು ತನ್ನ ಇಡೀ ವಾರದ ಪಗಾರವೆಂದು ಕಳೆದ ದಿನ ಸಂಜೆ ದೊರಕಿಸಿದ ಹತ್ತು ರೂಪಾಯಿಯ ನೋಟನ್ನು ಹಿಂದು ಮುಂದಿನ ವಿಚಾರವಿಲ್ಲದೆ ಹುಸೇನಿಯ ಕೈಯಲ್ಲಿಟ್ಟನು.

"ನಾಳೆ ದೌಡ ತಿರುಗಿ ಬಂದ್ಬಿಡು. ನಿಂಗ ಧನ್ಯಾರ ಭೆಟ್ಟಿ ಮಾಡಸ್ತೇನಿ. ಅವರಿಗೆ ಇಪ್ಪತ್ತೆಂಟು ಮಂದಿ ಸಾಹೇಬರ ಗುರ್ತು ಐತಿ. ಯಾರಿಗರ ಹೇಳಿ ನಿಂಗ ಇನ್ನೂ ಹೆಚ್ಚು ಪಗಾರ ಸಿಗೂವಂಗ ಮಾಡಬಹುದು" ಎಂದು ಹೇಳಿ ಅಲ್ಲಾಸಾಬ ತನ್ನ ಕೆಲಸಕ್ಕೆ ತಾನು ಹೊರಟು ಹೋದನು. ಇತ್ತ ಹುಸೇನಿಯೂ ತನ್ನ ಅರಿವೆಗಳನ್ನೆಲ್ಲ ತೆಗೆದುಕೊಂಡು ಹೊರಟು ಹೋದನು.

ನಾಲ್ಕುದಿನ ಕಳೆದರೂ ಹುಸೇನಿಯು ತಿರುಗಿ ಊರಿಗೇ ಬರಲಿಲ್ಲ. ಇತ್ತ ಶಾನುಭೋಗರ ರಂಗೂ ಬೇರೆ "ನಿಮ್ಮ ತಮ್ಮ ನಪಾಸಾಗ್ಯಾನ" ಎಂದು ಹೇಳಿದನು. ಅಲ್ಲಾಸಾಬನಿಗೆ ಹುಚ್ಚೇ ಹಿಡದಂತಾಯಿತು. ಫಾತವ್ವ "ತನ್ನ ಮಗ ನಪಾಸು ಆಗಿದ್ದುದನ್ನು ಮನಸ್ಸಿಗೆ ಹಚ್ಚಿಕೊಂಡು ಎತ್ತ ಭಾವಿ ಕೆರೆ ಬಿದ್ದು ಜೀವ ಕಳೆದುಕೊಂಡನೋ?" ಎಂದು ಬೋರಾಡಿ ಅಳಹತ್ತಿದಳು. ಅಲ್ಲಾಸಾಬ ತಾನೇ ಸ್ವತಃ ಹುಬ್ಬಳ್ಳಿಗೆ ಹೋಗಿ ತನ್ನ ತಮ್ಮನನ್ನು ಹುಡುಕಾಡಿದ. ತನ್ನ ಗುರುತಿನವರಿಗೆ, ಬಂಧು ಬಳಗದವರೆಲ್ಲರಿಗೆ ಪತ್ರ ಬರೆದು ತನ್ನ ತಮ್ಮ ಎಲ್ಲಿಯಾದರೂ ಸಿಕ್ಕರೆ ದಯಮಾಡಿ ಮನೆಗೆ ಕರೆದುಕೊಂಡು ಬರಬೇಕು; ಎಂದು ಬೇಡಿಕೊಂಡ. ಆದರೆ ಇದ್ಯಾವದೂ ಅಲ್ಲಾಸಾಬನ ಉಪಯೋಗಕ್ಕೆ ಬೀಳಲಿಲ್ಲ. ದಿನಗಳ ಮೇಲೆ ದಿನಗಳು ಉರುಳಿದರೂ ಹುಸೇ

ನಿಯ ಸುದ್ದಿಯೇ ಹತ್ತಲಿಲ್ಲ.

ಮಗನ ಚಿಂತೆಯಿಂದ ಕೊರಗಿ ಕೊರಗಿ ತಾಯಿ ಫಾತವ್ವ ಸಾಯಲಾದಳು. ಹಗಲು ರಾತ್ರಿ ಆಕೆಗೆ ತನ್ನ ಮಗನ ಬಡಬಡಿಕೆಯೇ ಬಡಬಡಿಕೆ. ಮೊದಲೇ ಹಣ್ಣಾದ ಅವಳ ದೇಹಕ್ಕೆ ಇಂತಹ ವಜ್ರಾಘಾತವನ್ನು ಸಹಿಸುವ ಶಕ್ತಿ ಉಳಿದಿರಲಿಲ್ಲ. ದಿನಬಿಟ್ಟು ದಿನ ಜ್ವರ ಬರಲಿಕ್ಕೆ ಹತ್ತಿದವು. ಅಲ್ಲಾಸಾಬ ತನ್ನ ತಮ್ಮನನ್ನು ಹುಡುಕಾಡುವದನ್ನು ಬಿಟ್ಟುಕೊಟ್ಟು ತನ್ನ ತಾಯಿಯ ಆರೈಕೆಗಾಗಿ ನಿಲ್ಲಬೇಕಾಗಿ ಬಂತು.

“ಅವ ಎಲ್ಲೆ ಹೋಗ್ತಾನ? ಇಂದಿಲ್ಲಾ ನಾಳೆ ಬಂದೇ ಬರತಾನ. ಅವನ ಮಾಸ್ತರಿಗೆ ಮೊನ್ನೆ ಹೋಗಿ ಭೆಟ್ಟಿಯಾಗಿ ಬಂದೇನಿ. ಅವ ಎಲ್ಲಿದ್ದರೂ ಹುಡುಕಾಡಿ ಕರಕೊಂಡ ಬರತೇನಿ ಅಂತ್ಹೇಳ್ಯಾರವರು. ಸುಮ್ಮಕ ಯಾಕ ಎದಿ ಒಡಕೊಂತೀ?” ಎಂದು ಅಲ್ಲಾಸಾಬ ತನ್ನ ತಾಯಿಗ ಧೈರ್ಯ ಹೇಳುತ್ತಿದ್ದರೂ ಅವನಿಗೇ ಧೈರ್ಯ ಹೇಳುವವರ ಅವಶ್ಯಕತೆ ಹೆಚ್ಚಿದ್ದಿತು.

ಫಾತವ್ವನನ್ನು ಛಳಿಜ್ವರದಿಂದ ಪಾರು ಮಾಡಬೇಕಾದರೆ ಸಾಕುಬೇಕಾಗಿ ಹೋಯಿತು. ಆದರೆ ಅವಳ ಮನಸ್ಸು ಕೊರೆಯುತ್ತಿದ್ದ ಮಗನ ಚಿಂತೆಯನ್ನು ದೂರ ಮಾಡುವದು ಮಾತ್ರ ಅಲ್ಲಾಸಾಬನಿಗೆ ಶಕ್ಯವಾಗಲಿಲ್ಲ. ಅವಳು ಎಲ್ಲವನ್ನೂ ಮರೆತು ದೆವ್ವ ಹಿಡಿದವರಹಾಗೆ ಶೂನ್ಯ ದೃಷ್ಟಿಯಿಂದ ಎತ್ತಲೋ ನೋಡುತ್ತ ಸುಮ್ಮನೆ ತಾಸು-ತಾಸುಗಳವರೆಗೆ ಕೂಡ್ರುವದನ್ನು ಕಂಡು ಅಲ್ಲಾಸಾಬನ ಹೃದಯವೇ ಹಿಂಡಿದಂತಾಗುತ್ತಿತ್ತು. ಆದರೆ ಅವನು ನಿರುಪಾಯನಾಗಿದ್ದನು. ಎಲ್ಲ ಹೊರೆಯನ್ನೂ ದೇವರ ಮೇಲೆ ಹೊರಿಸಿ, ಮನಸ್ಸಿಲ್ಲದ ಮನಸ್ಸಿನಿಂದ ದುಡಿದುಬಂದು ತನ್ನ ತಾಯಿಯ ಆರೈಕೆ ಮಾಡವುದರಲ್ಲಿ, ಅವನಿಗೆ ತನ್ನ ತಮ್ಮನ ಬಗ್ಗೆ ವಿಚಾರ ಮಾಡಲು ಹೊತ್ತೇ ಉಳಿಯುತ್ತಿರಲಿಲ್ಲವೋ ಏನೋ? ಇತ್ತಿತ್ತಲಾಗಿ ಅವನು ತನ್ನ ತಮ್ಮನ ವಿಷಯವಾಗಿ ಒಂದು ಮಾತನ್ನೂ ಉಚ್ಚರಿಸಿರಲಿಲ್ಲ. ಆದರೆ ಫಾತವ್ವ ಮೇಲಿಂದ ಮೇಲೆ ತನ್ನ ಚಿಕ್ಕ ಮಗನ ನೆನಪು ಮಾಡಿಕೊಂಡು ಹಣೆಹಣೆ ಗಟ್ಟಿಸಿಕೊಂಡು ಅಳುವದನ್ನು ಮಾತ್ರ ಕಡಿಮೆ ಮಾಡಿರಲಿಲ್ಲ. ಅವಳು ಕೂಡ್ರುವಾಗ್ಗೆ ಒಮ್ಮೆ ಏಳುವಾಗ್ಗೆ ಒಮ್ಮೆ ಹೀಗೆ ಮೇಲಿಂದಮೇಲೆ ಹಾಕುತ್ತಿದ್ದ ಬಿಸಿಯುಸಿರಿನ ಶಾಕೆಯು ಕ್ಷೀರಸಾಗರದ ತಂಪನ್ನೇ ನುಂಗಿ ಅದರ ತಳದಲ್ಲಿ ಅಡಗಿಕೊಂಡ

ದೇವರಿಗೆ ಬಡಿಯುಬೇಕಾದರೆ ಆರು ತಿಂಗಳ ಅವಧಿ ಅವಶ್ಯವಾಯಿತೋ ಏನೋ ಎನ್ನುವಂತೆ ಅಂದು ಹುಸೇನಿಯಿಂದ ಅಲ್ಲಾಸಾಬನಿಗೆ ಒಂದು ಪತ್ರ ಬಂದಿತು.

ಗಿರಣಿಚಾಳ-ಪರೇಳ, ಮುಂಬಯಿ.

ಅಣ್ಣನಿಗೆ ಭಕ್ತಿಪೂರ್ವಕ ನಮಸ್ಕಾರಗಳು-ತರುವಾಯ, ಈಗ ನಾನು ಮುಂಬೈಯಲ್ಲಿ ಇದ್ದೇನೆ. ಇಷ್ಟು ದಿನಗಳವರೆ ಇಲ್ಲಿಯೇ ಒಂದು ಅರಿವೆ ಗಿರಣಿಯಲ್ಲಿ ಕೆಲಸ ಮಾಡುತಿದ್ದೆ. ಆದರೆ, ಕಳೆದ ಹದಿನೈದು ದಿನಗಳಿಂದ ನನಗೆ ಜ್ವರ ಬರಹತ್ತಿದ್ದರಿಂದ ಕೆಲಸ ಬಿಟ್ಟಿದ್ದೇನೆ. ಆದ್ದರಿಂದ ಈ ತಿಂಗಳ ಪಗಾರವು ಬರುವದಿಲ್ಲ. ಆದಕ್ಕಾಗಿ ನೀವು ಹೇಗಾದರೂ ಮಾಡಿ ನನಗೆ ಐವತ್ತು ರೂಪಾಯಿಗಳನ್ನ ಕಳಿಸಿಕೊಡಬೇಕು. ನನಗೆ ಸ್ವಲ್ಪ ನೆಟ್ಟಗಾಗುತ್ತಲೆ ನಾನೇ ಊರಿಗೆ ಹೊರಟುಬರುತ್ತೇನೆ. ಇಲ್ಲಿ ದಂಗೆ ನಡೆದಿರುವದು. ತಾವು ಇಲ್ಲಿಗೆ ಬರುವ ಗೋಜಿಗೆ ಹೋಗಬಾರದು. ನಾನು ಸುರಕ್ಷಿತ ಇರುವೆನು. ಕಾಳಜಿ ಮಾಡಬಾರದು. ಮತ್ತು ಐವತ್ತು ರೂಪಾಯಿಗಳನ್ನು ದಯಮಾಡಿ ತೀವ್ರ ಕಳಿಸಿಕೊಡಲಿಕ್ಕೆ ಮರೆಯಬಾರದು.

—ತಮ್ಮ ದುರ್ದೈವಿ ತಮ್ಮ,
ಹುಸೇನಿ.

ಪತ್ರದಲ್ಲಿ ಹುಸೇನಿಯು ಏನು ಬರೆದಿರುವನೆಂಬುದನ್ನು ಅಲ್ಲಾಸಾಬನು ತನ್ನ ತಾಯಿಗೆ ತಿಳಿಸಿ ಹೇಳಿದ ಮೇಲೆ ಆರು ತಿಂಗಳುಗಳಿಂದ ಮುದುಡಿದ ಆವಳ ಮುಖವು ಅರಳಿತು.

"ಎಲ್ಲಾದ್ರು ಇರವಲ್ಲ್ಯಾಕ-ಅದಾದರೂ ತಿಳೀತಲ್ಲ!" ಎಂದೊಂದು ನಿಡಿದಾದ ಉಸಿರು ಹಾಕಿದಳು ಫಾತವ್ವ ಮುಗುಳುನಗೆ ನಗುತ್ತ. ಒಂದು ಕ್ಷಣ ಹೊತ್ತಿನವರೆಗೆ ಎಲ್ಲವನ್ನೂ ಮರೆತು ತನ್ನ ಆನಂದಸಾಗರದಲ್ಲಿಯೇ ಮುಳುಗಿದ್ದಳು. ಆದರೆ ಮರುಗಳಿಗೆಯಲ್ಲಿಯೇ ಮತ್ತೆ ಆಕೆಯನ್ನು ಚಿಂತೆಯು ಆಕ್ರಮಿಸಿತು.

"ಬಾಳ ಜರ ಐತಂತೇನು?" ಪ್ರಶ್ನೆ ಹಾಕಿದಳು ಫಾತವ್ವ.

"ಅಷ್ಟೇನ ಬಾಳಿಲ್ಲ ಅಂತ ಬರದಾನ."

"ಅಗಸುದ್ದಿ ತಗೋಳಾಕ ಹತ್ಯಾನಂತೇನ?"

"ತಗೊಂತಿದ್ದಾನು. ನಾ ಹ್ಯಾಂಗ ಹೇಳ್ಲಿ ಅದನ್ನ?"

"ಅಗಸುದ್ದೆ ತಗೊಂಡ್ರ ಪತ್ತೇದ ಕೂಳು ಯಾರು ಮಾಡಿ ಹಾಕ ಬೇಕು ಅವಗ? ಹ್ಯಾಂಗ ಮಾಡತಾನೋ ಏನೋ? ಗುರುತಿನವ್ರ-ಖೂನಿನವ್ರ? ತಾಯಿ ಅಣ್ಣಾ ಬಳಗಾ ಇದ್ದೂ ನನ್ನ ಮಗ ಪರದೇಶಿ ಆಗೇತಿ!" ಎಂದು ಬಿಕ್ಕಿಬಿಕ್ಕಿ ಅಳಹತ್ತಿದಳು. ಅಲ್ಲಾಸಾಬನೂ ಅವಳನ್ನು ಸಮಾಧಾನಪಡಿಸುವ ಸ್ಥಿತಿಯಲ್ಲಿರಲಿಲ್ಲ. ಘಾತವ್ವನು ಕೆಲವು ನಿಮಿಷಗಳವರೆಗೆ ಅತ್ತು ತಾನೇ ಸುಮ್ಮನಾಗಿ ಒಮ್ಮೆಲೇ ಏನೋ ನೆನಪಾದವಳಂತೆ—

"ದಂಗೆ ಏನ ನಡದೈತಿ ಅಲ್ಲೆ?" ಎಂದು ಕೇಳಿದಳು ಅಲ್ಲಾಸಾಬನಿಗೆ.

"ಹಿಂದೂ ಮುಸಲಮಾನ ಮಂದಿ ನಡಾರಕ ಹೊಡದಾಟ ಆಗತಾವ. ಒಬ್ಬರಿಗೊಬ್ಬರು ಚೂರಿಲಿಂದ ತಿವಿತಾರ. ಹಿಂಗಾಗಿ ದಿನಾ ಹತ್ತಿಪ್ಪತ್ತು ಹೆಣಾ ಬೀಳತಾವ. ಅಲ್ಲೆ ಬಾಳ ತ್ರಾಸ ಐತಿ ಈಗ. ಮನಿಬಿಟ್ಟು ಹೊರ ಬಿದ್ದ ಮನಸ್ಯಾ ತಿರುಗಿ ಮನಿಗೆ ಬರೂವಂಟಾ ಭರೋಸ ಇಲ್ಲ" ಎಂದು ತನ್ನ ಧನಿಯರಿಂದ ಕೇಳಿ ತಿಳಿದ ವಿಷಯವನ್ನು ತನ್ನ ತಾಯಿಗೆ ಒಪ್ಪಿಸಿದ ಅಲ್ಲಾಸಾಬ.

"ಹಿಂಗ್ಯಾಕ ಬಡಿದಾಡತಾರವರು ಹಿಂದೂ-ಮುಸಲಮಾನ ಮಂದಿ?"

"ಮುಸಲಮಾನ ಮಂದಿ ತಮ್ಮ ಸಲುವಾಗೇ ತಮ್ಮದs ಒಂದು ರಾಜ್ಯ ಇರಬೇಕು. ಈ ಹಿಂಧೂ ಮಂದಿ ಕೂಡ ನಾವು ಇರಾಕಿಲ್ಲ ಅಂತಾರ. ಒಂದ ಮನಿ ಒಡದು ಯಾಡ ಮಾಡೂದು ಬ್ಯಾಡ. ಎಲ್ಲಾರು ಕೂಡೇ ಇರೂನು ಅಂತ ಗಾಂಧೀಮಹಾತ್ಮಾ ಅಂತಾನ. ಇಬ್ಬರೂ ಒಪ್ಪವಲ್ಲರು. ಅದರ ಸಲುವಾಗಿ ಇವರು ಬಡಿದಾಡತಾರಂತ ದಿನಾ ಮುಂಬೈದಾಗ."

"ಮತ್ತ ನಮ್ಮ ಊರಾಗ ಒಂಚೂರೂ ಬಡಿದಾಟ ಇಲ್ಲಲ್ಲಾ?"

"ನಮ್ಮ ಮಾತs ಬ್ಯಾರೆ. ನಾವಿಲ್ಲೆ ಹಿಂದೂ-ಮುಸಲಮಾನ ಮಂದಿ ಅಣ್ಣ-ತಮ್ಮಂದಿರಕಿಂತ ಹೆಚ್ಚ ಅದೇವಿ. ಆದರ ಹಿಂಗ ನಾವಿರಾವರು ವಬ್ಬುಮಂದಿ. ತಾವs ಒಳ್ಳೇ ಶಾಣ್ಯಾರು ಅಂತ್ಹೇಳಿ ಬಡದಾಡಾಕ ಹತ್ಯಾರಂತ. ದಿನಾ ಎಷ್ಟ ಮಂದಿ ಸಾಯತೈತಿ ಲೆಕ್ಕಾನs ಇಲ್ಲ. ಧನ್ಯಾರ ದಿನಾ ವರ್ತಮಾನಪತ್ರ ಓದತಾರಲ್ಲ-ಅದರಾಗ ಬರೇ ಇದs ಸುದ್ದೀನ ಇರತೈತಿ."

" ಹಂಗಾರ ಇಂಥಾ ದಂಗೇದಾಗ ನನ್ನ ಮಗ ಹ್ಯಾಂಗ ಅದಾನೋ ಏನೋ "? ಎಂದೆನ್ನುವಷ್ಟರಲ್ಲಿಯೋ ಮತ್ತೆ ಆಕೆಗೆ ದುಃಖ ಉಮ್ಮಳಿಸಿ ಬಂದಿತು.

" ಸೀಕಿನ ಮನಸ್ಯಾ ಬ್ಯಾರೆ. ಊರ ತುಂಬ ದಂಗೆ. ಮನಿಬಿಟ್ಟು ಹೊರಬೀಳುವಂಗಿಲ್ಲ. ಒಬ್ಬರ ಖೂನಿಲ್ಲ–ಗುರುತಿಲ್ಲ. ಹ್ಯಾಂಗ ಬದುಕಬೇಕು ನನ್ನ ಮಗ ಅಂತಾ ಊರಾಗ? " ಮತ್ತಷ್ಟು ಅಳಹತ್ತಿದಳು ಫಾತವ್ವ.

" ಹೊಟ್ಟೆಗೆ ಕೂಳಿಲ್ಲದ ಸತ್ತಹೋದೀತು ನನ್ನ ಮಗ–ನೀ ಇವತ್ತಿಂದಿವತ್ತ ನಿಂತ ಕಾಲಮ್ಯಾಲೆ ಮುಂಬೈಕ ಹೋಗಿ ಕರಕೊಂಡಬಾ ಅಲ್ಲಾ ಅವನ್ನ. "

" ನಾ ಹೋಗಲ್ಯಾ ಮುಂಬೈಕ? " ಎಂದು ಆಶ್ಚರ್ಯದಿಂದ ಕೇಳಿದ ಅಲ್ಲಾ ಸಾಬ.

" ಮತ್ಯಾರದಾರ ಹೋಗವರು ಮನ್ಯಾಗ? ಮತ್ತೇನ ನಾ ಹೋಗಲೇನು? " ಎಂದು ಸ್ವಲ್ಪ ಸಿಟುಕಿನಿಂದಲೇ ಕೇಳಿದಳು ಫಾತವ್ವ.

" ನಿನಗ ಹೋಗ ಅನಲಿಲ್ಲ ಬೇ–ಸುಳ್ಳ ಎನರ ಮಾತಾಡತಿಯಲ್ಲ. ಮುಂಬೈಯಂದ್ರ ನೀ ಏನಂತ ತಿಳಕೊಂಡೀದಿ? ಒಂದ ಮಾತ ತಿಳಿವಂಗಿಲ್ಲ ಕತಿ ತಿಳಿವಂಗಿಲ್ಲ. ನಮ್ಮ ಚಿಕ್ಕ ಧನ್ಯಾರು ಇಂಥಿಂಥಾ ಪರೀಕ್ಷೆ ಪಾಸ ಆಗೇರ. ಅವರ್ಽ ಅಲ್ಲಿ ದಾರಿ ತಪ್ಪಿಸಿಕೊಂಡ ಹಿಂಗ ತಿರಗಾಡಿದ್ದರಂತ ಮೂರನಾಕ ತಾಸು. ಇನ್ನು ನನ್ನಂಥವ ಆ ಊರಿಗೋದರ ತೀರೇ ಹೋತಲ್ಲಾ—ಸಾಯುದ ಸೈ! "

" ಅಂಥಾ ಊರಾಗ ಹ್ಯಾಂಗೈತೋ ನನ್ನ ಮಗ–ಒಂದ ಮಾತ ತಿಳಿವಂಗಿಲ್ಲ ಕತಿ ತಿಳಿವಂಗಿಲ್ಲಂತೀ–ಸೀಕೀನ ಮನಸ್ಯಾ ಬ್ಯಾರೆ—ಅಲ್ಲೇ ಬಿದ್ದಲೇ ವಿಲಿವಿಲಿ ಒದ್ದಾಡಿದ್ದೀತು ನನ್ನ ಕಂದವ್ವ! " ಎಂದು ಮತ್ತಷ್ಟು ಜೋರಾಗಿ ಅಳಹತ್ತಿದಳು ಫಾತವ್ವ. ಅವಳನ್ನು ಸಮಾಧಾನ ಪಡಿಸಬೇಕಾದರೆ ಅಲ್ಲಾ ಸಾಬನಿಗೆ ಸಾಕು ಬೇಕಾಗಿಹೋಯಿತು. ಕಡೆಗೆ " ನಾನೇ ಹೋಗುತ್ತೇನೆ " ಎಂದು ಹೇಳದೆ ನಿರ್ವಾಹವೇ ಉಳಿಯಲಿಲ್ಲ.

ಅದಕ್ಕಾಗಿಯೋ ಅವನು ದಿನದಂತೆ ಅಂದು ನಸುಕಿನಲ್ಲಿಯೋ ಎದ್ದು ಧನಿಯರ ಮನೆಗೆ ಹೋಗದೆ, ಮುಂಜಾನೆ ಆರು ಘಂಟೆಯಾದರೂ ಇನ್ನೂ

ಹಾಸಿಗೆಯಲ್ಲಿಯೇ ಇದ್ದ. ಎಂದೂ ಇಲ್ಲದ ಹುರುಪಿನಿಂದ ಅಂದು ನಸುಕಿನಲ್ಲಿಯೇ ಎದ್ದು ಫಾತವ್ವ ಜೋಳ ಬೀಸಹತ್ತಿದ್ದಳು. ತನ್ನ ಚಿಕ್ಕ ಮಗನಲ್ಲಿ ಇಲ್ಲದ ಎಲ್ಲ ಗುಣಗಳೂ ಅವನಲ್ಲಿವೆ ಎಂದು ತಿಳಿದುಕೊಂಡವಳಂತೆ ಹುಸೇನಿಯನ್ನು ತನ್ನ ಹಾಡುಗಳಲ್ಲಿ ಮನಸಾರೆ ಹೊಗಳಹತ್ತಿದ್ದಳು. ಅವುಗಳನ್ನು ಚಿತ್ತಗೊಟ್ಟು ಕೇಳುತ್ತಾ ಮತ್ತು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಾ ಅಲ್ಲಾಸಾಬ ಇನ್ನೂ ಹಾಸಿಗೆಯಲ್ಲಿಯೇ ಇದ್ದನು.

ಫಾತವ್ವನು ಜೋಳ ಬೀಸುವವನ್ನು ಮುಗಿಸಿ, ಎಲ್ಲಿ ತನ್ನಿಂದಲೇ ಹೊತ್ತಾಗಿ ಗಾಡಿ ತಪ್ಪೀತೋ ಎನ್ನುವ ಭಯದಿಂದ ಲಗುಬಗೆಯಿಂದ ರೊಟ್ಟಿ ಸುಡಲು ನಡೆದಳು. ಅಲ್ಲಾಸಾಬನೂ ಹಾಸಿಗೆಯಿಂದೆದ್ದು ತನ್ನ ಪ್ರಾತರ್ವಿಧಿಗಳನ್ನು ತೀರಿಸಲು ನಡೆದನು.

ಅಲ್ಲಾಸಾಬನು ತನ್ನ ತಾಯಿಯ ತೋಳುಬಂದಿಗಳನ್ನು ಮಾರವಾಡಿಯ ಹತ್ತಿರ ಒತ್ತೆಯಿಟ್ಟು ಎಂಭತ್ತು ರೂಪಾಯಿಗಳನ್ನು ತೆಗೆದುಕೊಂಡು ಬಂದನು. ಮತ್ತು ಊರಿಗ್ಹೋಗುವ ಸಿದ್ಧತೆಯನ್ನು ಮಾಡಹತ್ತಿದನು. ಫಾತವ್ವನು ಹತ್ತು ಜನರಿಗೆ ಆಗುವಷ್ಟು ಅಡಿಗೆಯನ್ನು ಕಟ್ಟಿ ತನ್ನ ಮಗನ ಕೈಯಲ್ಲಿ ಕೊಟ್ಟಳು. ಅಲ್ಲಾಸಾಬನು ತನ್ನ ತಾಯಿಯ ಕೈಯಲ್ಲಿ ಹತ್ತು ರೂಪಾಯಿಗಳನ್ನು ಕೊಟ್ಟು "ನಾ ಬರೂದು ನಾಕದಿನಾ ತಡಾ ಆದ್ರೂ ನೀ ಕಾಳ್ಜಿ ಮಾಡಬಾರದು. ನಾ ಹ್ಯಾಂಗರ ಮಾಡಿ ಅವನ್ನ ಕರಕೊಂಡs ಬರತೇನಿ" ಎಂದು ಹೇಳಿ, ಅವಳ ಪಾದಗಳಿಗೆ ನಮಸ್ಕರಿಸಿ ಆಶೀರ್ವಾದ ಪಡೆದು ರಣಾಂಗಣಕ್ಕೆ ಹೊರಟ 'ಅನ್ನದ ಸೈನಿಕ'ನಂತೆ ಭಾರವಾದ ಹೆಜ್ಜೆಗಳನ್ನಿಡುತ್ತಾ ಮಧ್ಯಾಹ್ನ ಎರಡು ಘಂಟೆಗೆ ಮುಂಬೈಗೆ ಹೋಗುವ ಗಾಡಿ ಬರುವದಿದ್ದರೂ ಇವನು ಇನ್ನೂ ಹತ್ತು ಘಂಟೆಗೇ ಹೋಗಿ ಸ್ಟೇಶನ್ನಿನಲ್ಲಿ ಕುಳಿತುಕೊಂಡ.

ಅಲ್ಲಾಸಾಬನು ಮುಂಬೈ ನಿಲ್ದಾಣದಿಂದ ಹೊರಗೆ ಬರುತ್ತಲೇ ಮಂಕು ಹಿಡಿದವರಂತೆ ಸುಮ್ಮನೇ ನಿಂತುಬಿಟ್ಟನು. ಒಂದರಹಿಂದೊಂದು ಟ್ರಾಮು, ಬಸ್ಸು, ಟ್ಯಾಕ್ಸಿ, ಸಾಯಕಲ್ಲುಗಳು ತೆರಪಿಲ್ಲದೇ ಓಡಾಡಹತ್ತಿವೆ. ಅವುಗಳಲ್ಲಿಯೇ ಮಾರ್ಗ ಮಾಡಿಕೊಂಡು ಎಷ್ಟೂ ಹೆದರದೆ ತಂಡೋಪತಂಡವಾಗಿ ಜನರು ರಸ್ತೆ ಹಿಡಿಯದಂತೆ ಬರಹತ್ತಿದ್ದಾರೆ. ಈಸು ಬಾರದವನು ಮೊದ

ಲನೇಸಾನಿ ಈಸಲಿಕ್ಕೆಂದು ಬಾನಿಗೆ ಹೋಗಿ, ದಂಡೆಯ ಮೇಲೆ ನಿಂತು ಏಕ ಚಿತ್ತದಿಂದ ನೀರನ್ನೇ ದೃಷ್ಟಿಸುವವನಂತೆ ಅಲ್ಲಾ ಸಾಬ ಈ ಜನಸ್ತೋಮವನ್ನು ನೋಡುತ್ತಾ ನಿಂತುಕೊಂಡನು. 'ಇಂಥಾ ಗದ್ದಲದಾಗ ಸಿಕ್ಕಿನೆಂದ್ರ ಜೆಜ್ಜಿದ ನುಗ್ಗೀಕಾಯಿ ಆದಂಗಾದೀತು ನನ ಬಾಳೆ' ಎಂದು ಅಂದುಕೊಂಡ ಅಲ್ಲಾ ಸಾಬ ತನ್ನಷ್ಟಕ್ಕೆ ತಾನೇ. ಮೋಟಾರ ಬಂದಿತೆಂದು ಆಚೆಯ ಬದಿಗೆ ಓಡುತ್ತಾ, ಟ್ರಾಮು ಬಂದಿತೆಂದು ಮತ್ತೊಂದು ಬದಿಗೆ ಜಿಗಿಯುತ್ತಾ, ಸಾಯಕಲ್ ಸವಾರರಿಂದ ಬೈಗಳಗಳನ್ನು ತಿನ್ನುತ್ತಾ ಹಾಗೂ ಹೀಗೂ ದೊಡ್ಡ ರಸ್ತೆಯಲ್ಲಿ ಮೈತುಂಬ ಕಣ್ಣಿಟ್ಟುಕೊಂಡು ನಡೆದು ಪಾರಾಗಿ ಸ್ವಲ್ಪ ಜನ ಕಡಿಮೆಯಾದ ಸಣ್ಣ ಓಣಿಗೆ ಬಂದನು. ತನ್ನ ತಮ್ಮ ಪರೇಳದಲ್ಲಿ ಗಿರಣಿಚಾಳಿನಲ್ಲಿದ್ದಾನೆಂಬುದಷ್ಟೇ ಅವನಿಗೆ ಗೊತ್ತು. ಆದರೆ ಪರೇಳೆಲ್ಲಿದೆ ಎಂಬುದು ಅವನಿಗೆ ಗೊತ್ತಿರುವದು ಶಕ್ಯವಿರಲಿಲ್ಲ. ಅಲ್ಲದೆ ಸೂಟು-ಹ್ಯಾಟಿನಲ್ಲಿ ಬರುತ್ತಿದ್ದ ಅರ್ಧಸಾಹೇಬರಿಗೆ 'ಪರೇಳೆಲ್ಲಿದೆ' ಎಂದು ಕೇಳುವ ಧೈರ್ಯ ಅಲ್ಲಾ ಸಾಬನಲ್ಲಿರಲಿಲ್ಲ. ಕಡೆಗೆ ಧೋತರ ಉಟ್ಟ ಒಬ್ಬನನ್ನು ಧೈರ್ಯ ಮಾಡಿ "ಪರೇಳೆಸ್ಸೈತ್ರಿ ?" ಎಂದು ಕೇಳಿಯೇಬಿಟ್ಟನು. ಅವನು "ತಿಕಡ ಇಕಡೆ" ಎಂದು ಎಷ್ಟೋ ಹೊತ್ತಿನವರೆಗೆ ಕೈಮಾಡಿಮಾಡಿ ಏನೇನೋ ಹೇಳಿಯೇ ಹೇಳಿದನು. ಅವನು ಮಾತಾಡಿದ್ದರಲ್ಲಿ ಒಂದು ಶಬ್ದ ಸಹ ತಿಳಿಯದಿದ್ದರೂ ಅಲ್ಲಾ ಸಾಬನು ಅವನು ಹೇಳಿದ್ದಕ್ಕೆಲ್ಲ ಗೋಣು ಹಾಕಿ ಮುಂದೆ ನಡೆದನು. ಕಡೆಗೆ ಒಬ್ಬ ಕನ್ನಡಿಗನು ಸುದೈವದಿಂದ ಅಲ್ಲಾ ಸಾಬನ ಪ್ರಶ್ನೆಗೆ ಯೋಗ್ಯ ಉತ್ತರ ಹೇಳಿದನಂತರ, ಅಲ್ಲಾ ಸಾಬನು ಅವನ ಹೇಳಿಕೆಯಂತೆ ಪ್ರತಿಯೊಂದು ಹೆಜ್ಜೆಗೂ ವಿಚಾರಮಾಡುತ್ತ, ಎಡಬಲಕ್ಕಿದ್ದ ಐದಾರು ಅಂತಸ್ತಿನ ಮಹಲುಗಳನ್ನು ನೋಡಿ ತನ್ನಲ್ಲಿ ತಾನು ಆಶ್ಚರ್ಯಪಡುತ್ತಾ, ನಾಲ್ಕೈದು ಓಣಿಗಳನ್ನು ದಾಟಿ ಒಂದು ನಿರ್ಜನವಾದ ಓಣಿಗೆ ಬಂದನು. ಅಲ್ಲಿಯೂ ದೊಡ್ಡ ದೊಡ್ಡ ಇಮಾರತಗಳಿದ್ದವು. ದೊಡ್ಡ ರಸ್ತೆಯೂ ಇದ್ದಿತು. ಆದರೆ ಒಂದು ಮನೆಯ ಬಾಗಿಲುಕೂಡಾ ತೆರೆದಿರಲಿಲ್ಲ. ರಸ್ತೆಯ ಮೇಲೆ ಇಟ್ಟಂಗಿಯ ಚೂರುಗಳೂ, ಕಲ್ಲುಗಳೂ ಬಿದ್ದಿದ್ದವು. ಸ್ಮಶಾನದಂತೆ ಭಯಾನಕವಾಗಿ ಹಾಳು ಸುರಿಯುತ್ತಿತ್ತು.

ಅಲ್ಲಾ ಸಾಬನಿಗೆ ಇದನ್ನು ಕಂಡು ಹೆದರಿಕೆಯೂ ಮತ್ತು ಆಶ್ಚರ್ಯವೂ ಏಕಕಾಲಕ್ಕೇ ಆದವು. ಆದರೆ ಆ ಓಣಿಯಲ್ಲಿ 'ಕರ್ಫ್ಯೂ' ಆಜ್ಞೆ ಕೃತಿಯಲ್ಲಿ

ಬಂದಿದೆ ಎಂಬುದು ಅವನಿಗೆ ಹೇಗೆ ತಿಳಿಯಬೇಕು ? ಯಾವುದೂ ಗೊತ್ತಾಗದೆ ಸುಮ್ಮನೆ ಮುಂದೆ ನಡೆದನು. ಅವನು ನಡು ಓಣಿಯಲ್ಲಿ ಬರುವಷ್ಟರೊಳಗಾಗಿ ಅವನ ಹಿಂದಿನಿಂದ ಯಾರೋ ಧಾವಿಸಿ ಬಂದಂತೆ ಆಯಿತು. ಕಾಲು ಸಪ್ಪಳವು ಸ್ಪಷ್ಟವಾಗಿ ಅವನ ಕಿವಿಗೆ ಕೇಳಹತ್ತಿದವು. ಸಪ್ಪಳವು ತನ್ನ ಮಗ್ಗುಲದಲ್ಲಿಯೇ ಆದಂತಾಗಲು ಅವನು ಹೊರಳಿ ನೋಡಿದನು. ಆದರೆ ಅವನು ಹೊರಳಿ ನೋಡುವಷ್ಟರಲ್ಲಿಯೇ ಆ ಆಗಂತಕನ ಕೈಯೊಳಗಿನ ಚೂರಿಯು ಎದೆಯನ್ನು ಸೇರಿತ್ತು. ಕಾರಂಜಿಯಂತೆ ರಕ್ತ ಪುಟಿಯಹತ್ತಿತು.

" ಹುಸೇನಿ ? ? " ಎಂದು ಚಿಟ್ಟನೆ ಚೀರಿದವನೇ ನೆಲಕ್ಕೆ ಬಿದ್ದ ಅಲ್ಲಾಸಾಬ.

" ದಾದಾ ! ! " ಎಂದು ಕಿರಚಿಕೊಂಡ ಹುಸೇನಿ.

—'ಹೂಬಳ್ಳಿ - ಹೂಗಾರ'.

ಐದನೆಯ ಎಸಳು

# ಹೇಡಿ—ಹೆಂಗಸು!

ಬೆಳಗಿನ ಐದುಗಂಟೆಯಾಗಿರಬಹುದು. ಹುಣ್ಣಿವೆಯ ದಿನವಾದ್ದರಿಂದ ಸ್ವಚ್ಛವಾದ ಬೆಳದಿಂಗಳು ಎಲ್ಲೆಡೆಗೆ ಹರಡಿತ್ತು. ಯುದ್ಧದ ಸಮಯವಾದ್ದರಿಂದ ಬಿತ್ತಿಗೆ ಯಾಗದೆ ಹೊಲಗಳೆಲ್ಲ ಪಡ ಬಿದ್ದಿದ್ದವು. ಕಪ್ಪಾದ ನೆಲವು ಬೆಳದಿಂಗಳಿಂದೊಡಗೂಡಿ ಒಂದು ವಿಧವಾದ ಕಾಂತಿಯಿಂದ ಹೊಳೆಯುತ್ತಲಿದ್ದಿತು. ಅಲ್ಲಲ್ಲಿ ದಟ್ಟವಾದ ಕಪ್ಪು ನೆಳಲನ್ನು ಕೆಡವಿ ನಿಂತುಕೊಂಡ ಗಿಡ ಗಂಟಿಗಳು ಹೆದರಿಕೆ ಹುಟ್ಟಿಸುವಂತಿದ್ದವು. ಎಲ್ಲೆಡೆಗೂ ಹರಡಿದ ನಿಶ್ಶಬ್ದತೆಯೊ ಹುಳುಹುಪ್ಪಡಿಗಳ ಭಯಾನಕ ವಿಚಿತ್ರ ಶಬ್ದದಿಂದೊಡಗೂಡಿ ಮತ್ತಿಷ್ಟು ಭಯಾನಕವಾಗಿತ್ತು. ಈ ಎಲ್ಲ ವಿಲಕ್ಷಣ ಸಂಗತಿ

ಇಷ್ಟು ಭೀಕರ ವಿರಲಿಕ್ಕಿಲ್ಲ! ಅದನ್ನು ನೋಡುವ ಕಣ್ಣು ಕುರುಡಾಗ ಬೇಕು! ಆ ರೋಧವನ್ನು ಕೇಳುವ ಕಿವಿಯು ಕಿವುಡಾಗಬೇಕು!!

"ಇದಕ್ಕೆಲ್ಲ ಕಾರಣರಾರು? ಯಮನನ್ನು ಕೆಲಸದಿಂದ ನಿವೃತ್ತ ಮಾಡಿ ಅವನ ಕೆಲಸವನ್ನು ತಾವೇ ಮಾಡುತ್ತಿರುವವರಾರು? ಮೋಜನ ಮೋಹನ! ನಾನು! ನಾನೇ ನರಕ ಪುರಿಯ ರಾಜ! ನಾನೇಕೆ ಇಂತಹ ಭಯಂಕರ ಕೃತ್ಯವನ್ನು ಮಾಡಹತ್ತಿದ್ದೇನೆ? ಆ ಸೈನಿಕರು ನನ್ನ ವೈರಿಪಕ್ಷದವರೆಂದೇ? ಹೌದು. ಅವರು ನನ್ನ ವೈರಿಪಕ್ಷದ ಸೈನಿಕರು. ನನ್ನ ರಾಷ್ಟ್ರದ ಸ್ವಾತಂತ್ರ್ಯ ಹರಣ ಮಾಡಲು ಇಚ್ಛಿಸುತ್ತಿರುವ ಅಸಹ್ಯ ಸಾಮ್ರಾಜ್ಯಶಾಹಿಯ ತುತ್ತು ರೊಟ್ಟಿಗೆ ಮನಸ್ಸನ್ನೂ ದೇಹವನ್ನೂ ಮಾರಿಕೊಂಡ ಗುಲಾಮರು! ಅವರು ಈ ರೀತಿ ಸಾವಿನ ದವಡೆಯಲ್ಲಿ ಸಿಕ್ಕು ಹಿಂಸೆಗೊಳಪಟ್ಟು ಜಜ್ಜಿ ಹೋಗುವದೇ ಅವರಿಗೆ ತಕ್ಕ ಶಿಕ್ಷೆ! ಅವರಿಗೆ ಈ ಭೂಮಿಯಲ್ಲಿ ಜೀವಿಸಿರಲಿಕ್ಕೆ ಯಾವ ಹಕ್ಕೂ ಇಲ್ಲ. ಏಕೆ ಇಲ್ಲ? ಅವರೂ ಮಾನವರಲ್ಲವೇ? ಈ ಜಗತ್ತಿನಲ್ಲಿ ಹುಟ್ಟಿದ ಪ್ರತಿಯೊಂದು ಮಾನವ ಪ್ರಾಣಿಗೂ ಜೀವಿಸಿರಲಿಕ್ಕೆ ಸರಿಸಮಾನ ಹಕ್ಕಿದೆಯಲ್ಲವೇ? ಒಂದು ಪ್ರಾಣಿಯನ್ನು ನಾಶಗೊಳಿಸಿ ಜೀವಿಸಲಿಕ್ಕೆ ಮತ್ತೊಂದು ಪ್ರಾಣಿಗೆ ಯಾವಹಕ್ಕಿದೆ? ಆ ಒಂದು ಸಾವಿರ ಸೈನಿಕರನ್ನೂ ಕೊಂದು ಹಾಕಲಿಕ್ಕೆ ನನಗಾವ ಹಕ್ಕಿದೆ? ಅವರು ನನ್ನ ವೈರಿಪಕ್ಷದವರು; ನನಗೆ ಹಿತವಾಗುವಂತಹ ಕಾರ್ಯ ಮಾಡಲೊಲ್ಲರು; ಅದಕ್ಕೆ ನಾನು ಅವರನ್ನೆಲ್ಲ ಈ ಜಗತ್ತಿನಿಂದಲೇ ಒರೆಸಿಹಾಕಬೇಕೇ? ಅವರು ಅನ್ಯಾಯ ಮಾಡುತ್ತಿದ್ದಾರೆ ಅವರು ಬೇರೆಯವರ ಸ್ವಾತಂತ್ರವನ್ನೇ ಇಲ್ಲದಂತೆ ಮಾಡುವ ಕಾರ್ಯ ಕೈಕೊಂಡಿದ್ದಾರೆ! ಹೌದು! ಅವರು ಅನ್ಯಾಯ ಮಾಡ ಹತ್ತಿದ್ದಾರೆ. ಆದರೆ ಈ ಸೈನಿಕರು ಅದಕ್ಕೆ ಕಾರಣವಲ್ಲವಲ್ಲ! ಅವರಿಗೆ ತಾವು ಅನ್ಯಾಯ ಮಾಡುತ್ತಿದ್ದೇವೆ! ಎಂಬುದು ಗೊತ್ತಿದೆಯೋ? ಅವರಿ ತಮ್ಮ ಜೀವನ ಹೇಗೆ ಸಾಗಿಸಬೇಕೆಂಬುದು ಗೊತ್ತಾಗದೆ. ನವಕರಿ ಎಂದು ಅವರು ಈ ಸೈನಿಕ ವೃತ್ತಿಯನ್ನು ಕೈಕೊಂಡಿದ್ದರೇ? ಅವರು ಅನ್ಯಾಯ ಮಾಡುತ್ತಿರುವರೆಂದು ಹೇಗೆ ಹೇಳುವದು? ಅವರ ದೃಷ್ಟಿಯೇ ಬೇರೆ ಇರಬಹುದು. ಅವರ ವಿಚಾರಗಳೇ ಬೇರೆ ಇರಬಹುದು. ನಾನು ಅನ್ಯಾಯ ಮಾಡುತ್ತಿರುವೆನೆಂದು ಅವರೇಕೆ ತಿಳಿದು ಕೊಂಡಿರಬಾರದು? ನನ್ನ ದೃಷ್ಟಿ ಅವರ ದೃಷ್ಟಿ ಬೇರೆ ಬೇರೆ ಇರ

ಗಳಕಡೆಗೆ ಎಳ್ಳಷ್ಟೂ ಲಕ್ಷ್ಯಕೊಡದೆ. ತನ್ನೆದುರಿಗೆ ದೃಷ್ಟಿಹರಿಯುವವರೆಗೂ ಕಾಣುತ್ತಿದ್ದ ರೇಲು ಕಂಬಿಯನ್ನೇ ಶೂನ್ಯ ದೃಷ್ಟಿಯಿಂದ ನೋಡುತ್ತ ನಿಂತ ಮೇಜರ ಮೋಹನನನ್ನು ಕಂಡು ಬೆಳಗಿನ ಝಾವದ ತಂಗಾಳಿಯು ನಿರಾಶೆ ಗೊಂಡರೂ ಪ್ರಯತ್ನ ಮಾಡುವದನ್ನು ಬಿಡದೆ, ತನ್ನೊಡನೆ ಪಶ್ಚಿಮದ ಛಳಿ ಯನ್ನು ಕೂಡಿಸಿಕೊಂಡು ಬಂದು ಮೋಹನನ ರಕ್ತ ಹೆಪ್ಪುಗಟ್ಟುವಂತೆ ಮಾಡಲು ಯತ್ನಿಸಹತ್ತಿತ್ತು. ಇದಾವುದನ್ನೂ ಲೆಕ್ಕಿಸದೆ ಮೇಜರ ಮೋಹ ನನು ಸಮಾಂತರ ರೇಖೆಯಲ್ಲಿ ಬೆಳದಿಂಗಳಿನ ಹೊಳಪಿನೊಂದಿಗೆ ಹರಿದು ಹೋಗುತ್ತಿದ್ದ ರೇಲು ಕಂಬಿಗಳ ಮಧ್ಯದಲ್ಲಿ ನಿಂತುಕೊಂಡಿದ್ದನು. ಕೆಳಗೆ ಪೂಲಿನ ಬುಡದಲ್ಲಿ ಸುರಂಗ ಮದ್ದನ್ನು ತುಂಬಲಿಕ್ಕೆ ತನ್ನ ಕೈಕೆಳಗಿನ ಹತ್ತು ಜನ ಸೈನಿಕರಿಗೆ ತಾನೇ ಆಜ್ಞೆ ಕೊಟ್ಟಿರುವೆನೆಂಬುದನ್ನು ಕೂಡಾ ಮರೆತು ಬಿಟ್ಟಿದ್ದನು. ಅವರು ಮಾಡುತ್ತಿರುವ ಕೆಲಸದ ಪರಿಶೀಲನೆಗಾಗಿಯೇ ತಾನು ಮೇಲೆ ನಿಂತುಕೊಂಡಿದ್ದರೂ ಅವನು ತನ್ನ ಕರ್ತವ್ಯವನ್ನೇ ಮರೆತಂತಿದ್ದನು. ಅವನ ಕಣ್ಣುಗಳಿಗೆ ಆ ನಿರ್ಜೀವ ರೇಲು ಕಂಬಿಗಳು ಕಾಣಿಸುತ್ತಿದ್ದರೂ ಅವನ ಹೃದಯದ ಕಣ್ಣುಗಳ ಮುಂದೆ ಬೇರೆ ದೃಶ್ಯವೇ ಇದ್ದಿತು.

“ ರೇಲು ಗಾಡಿಯು ಒಂದು ಸಾವಿರ ಸೈನಿಕರನ್ನೂ ಎಷ್ಟೋ ಮದ್ದು ಗುಂಡುಗಳನ್ನೂ ಹೊತ್ತುಕೊಂಡುಬರಹತ್ತಿದೆ. ಗಾಡಿಯು ಸೇತುವೆ ಮೇಲಿರು ವಾಗ್ಗೆಯೇ ಸುರಂಗ ಹಾರಿತು. ಗಾಡಿ ಬುಡಮೇಲಾಯಿತು. ಎಷ್ಟೋ ಡಬ್ಬಿ ಗಳು ನುಚ್ಚು ನೂರಾಗಿವೆ. ಎಷ್ಟೋ ಡಬ್ಬಿಗಳಿಗೆ ಬೆಂಕೆಹತ್ತಿದೆ. ಗಾಡಿಯ ಲ್ಲಿದ್ದ ಮದ್ದಿಗೂ ಬೆಂಕಿ ಹತ್ತಿ ಅನೇಕ ಸ್ಫೋಟಗಳಾಗಹತ್ತಿವೆ. ಗಾಡಿಯ ಲ್ಲಿಯ ಸೈನಿಕರೆಲ್ಲರೂ ಅಸ್ತವ್ಯಸ್ತವಾಗಿ ಬಿದ್ದಿದ್ದಾರೆ. ಗಾಡಿಯ ಬುಡದಲ್ಲಿ ಸಿಕ್ಕು ಸತ್ತವರೆಷ್ಟೊ! ಅಪಘಾತದಿಂದ ಒಮ್ಮೆಲೇ ಹೃದಯಕ್ರಿಯೆ ನಿಂತು ಸತ್ತವರೆಷ್ಟೋ! ಕೈಕಾಲುಗಳನ್ನು ಮುರಿದು ಕೊಂಡು, ಎದೆಯ ಎಲುಬಿನ ಹಂದರ ಗಾಡಿಯ ಬುಡದಲ್ಲಿ ಸಿಕ್ಕು ಮುದ್ದೆಯಾಗಿ ಜಜ್ಜಿ ಹೋದವರೆಷ್ಟೋ! ಕೈಕಾಲು ಗಾಡಿಯ ಬುಡದಲ್ಲಿ ಸಿಕ್ಕು ಅವುಗಳನ್ನು ಹೊರಗೆ ಎಳೆದುಕೊಳ್ಳ ಲಾರದೆ ಒದ್ದಾಡಿ ಹೃದಯವನ್ನೇ ಹಿಂಡುವಂತಹ ಆರ್ತಸ್ವರದಿಂದ ರೋಧಿ ಸುತ್ತ ಮೃತಪಟ್ಟವರೆಷ್ಟೋ! ಎಲ್ಲಿ ನೋಡಿದಲ್ಲಿ ಸಾವು ನೋವು ತನ್ನ ತಾಂಡವನೃತ್ಯ ನಡೆಸಿದೆ. ಅದೇ ರೋಧನ! ಅದೇ ನರಳಿಕೆ! ನರಕವೂ

ಬಹುದು. ಒಬ್ಬರೊಬ್ಬರ ದೃಷ್ಟಿ ಬದಲಾವ ಮಾತ್ರಕ್ಕೆ ಒಬ್ಬರೊಬ್ಬರನ್ನು ಕೊಂದು ಹಾಕಬೇಕೇ ?

ಸರ್ವರೂ ಸುಖವಾಗಿ ಬಾಳಬಹುದಾದ ಈ ಜಗತ್ತಿನಲ್ಲಿ ಎಷ್ಟು ಅನ್ಯಾಯ; ಎಷ್ಟು ಹಿಂಸೆ! ಒಬ್ಬರನ್ನೊಬ್ಬರು ಹತ್ತಿಕ್ಕಿ ಸುಖಪಡಬೇಕೆಂದು ಪ್ರತಿಯೊಬ್ಬರು ಇಚ್ಛಿಸುತ್ತಾರೆಯೋ ಹೊರತಾಗಿ, ಪರರೊಂದಿಗೆ ಸಹಕರಿಸಿ ಅವರೂ ತಮ್ಮಂತೆ ಸುಖದಲ್ಲಿರುವದಕ್ಕೆ ಸಹಾಯ ಮಾಡಿ ತಾವೂ ಅವರ ಸುಖದಲ್ಲಿ ಭಾಗಿಗಳಾಗಬೇಕೆಂಬ ವಿಚಾರವೇ ಇಲ್ಲ. ಅದನ್ನು ಕಲಿಯಲೆಂದೇ ಮಾನವನು ಹತ್ತು ಸಾವಿರ ವರುಷಗಳಿಂದ ಪ್ರಯತ್ನಿಸುತ್ತಿದ್ದಾನೆ. ಆದರೂ ಕೂಡಾ ಮಾನವನು ನಾಗರಿಕತೆಯ ಒಂದು ಮೆಟ್ಟಿಲನ್ನು ಸಹ ಹತ್ತಲು ಶಕ್ಯನಾಗಿರುವದಿಲ್ಲ. ಎಲ್ಲರೂ ಒಬ್ಬರನ್ನೊಬ್ಬರು ಹತ್ತಿಕ್ಕು ವದರಲ್ಲಿಯೇ ತಮ್ಮ ಶಕ್ತಿಯನ್ನೆಲ್ಲ ವ್ಯಯಿಸಹತ್ತಿದ್ದಾರೆ. ಸುಳ್ಳು ಸುಳ್ಳೇ ಹೊತ್ತುಗಳೆಯುವದಕ್ಕಾಗಿ ತತ್ವದ ಮಾತುಗಳನ್ನಾಡುತ್ತಾರೆ. ಮಾನವೀಯತೆ ಎಂದು ಬೊಬ್ಬೆ ಹಬ್ಬಿಸುತ್ತಾರೆ ಆದರೆ ಮಾನವೀಯತೆಯ ಮೊದಲ ನೇಯ ಪಾಠಕೂಡಾ ಇವರಿಗೆ ಗೊತ್ತಿಲ್ಲ. ಗೊತ್ತಿದ್ದರೂ ಅದರ ಲವಲೇಶ ಕೂಡಾ ಕೃತಿಯಲ್ಲಿಳಿದಿಲ್ಲ. ಕೃತಿಯಲ್ಲಿಳಿಯಬಹುದೆಂಬ ಲಕ್ಷಣವೂ ಇಲ್ಲ.

"ನಾನಾದರೂ--ಮಾನವರೆಲ್ಲ ಒಂದು ಎಂಬ ಭಾವದಿಂದ ನಡೆದಿದ್ದೇನೇಯೇ? ನಾನೇ ಈಗ ಒಂದು ಸಾವಿರ ಮಾನವರಿಗೆ ಯಮಪಾಶ ಒಗೆಯಲು ಸಿದ್ಧನಾಗಿ ನಿಂತಿಲ್ಲವೆ? ಪಾಪ! ಆ ಸಾವಿರ ಸೈನಿಕರ ಹಿತೈಷಿಗಳೆಷ್ಟು ಸಾವಿರ ಜನರಿರುವರೋ ಏನೋ? ಇವರೆಲ್ಲ ಹೀಗೆ ಅಪಮೃತ್ಯುಗೊಳಗಾದ ಸುದ್ದಿಯನ್ನು ಕೇಳಿ ಅವರೆಷ್ಟು ಗೋಳು ಹೊಯ್ಯಕೊಳ್ಳಬಹುದು? ಇವರನ್ನೇ ತಮ್ಮ ಜೀವನದ ಆಸರ ಎಂದು ನಂಬಿ ಆಶೆಯಿಂದ ಎಷ್ಟು ಮುಂದಿ ತಾಯಿ ತಂದೆಗಳು ಜೀವಿಸಿರಬಹುದು! ಇವರನ್ನೇ ನೆರೆ ನಂಬಿ ಎಷ್ಟು ಜನ ಹೆಂಗಳೆಯರು ಚಿಕ್ಕ ಮಕ್ಕಳು ಜೀವಿಸುತ್ತಿರಬಹುದು!

"ಈ ಸಾವಿರ ಜನರೆನೋ ತಪ್ಪು ಮಾಡುತ್ತಿರಬಹುದು. ಆದರೆ ಆ ಸಾವಿರಾರು ಜನರು ಯಾವ ತಪ್ಪು ಮಾಡಿರುವರು? ಅಲ್ಲದೆ ಇವರಾದರೂ ತಪ್ಪು ಮಾಡಬೇಕೆಂದೇ ತಪ್ಪು ಮಾಡುತ್ತಿರಲಿಕ್ಕಿಲ್ಲ! ತಮ್ಮ ಜೀವನ ಸಾಗಿಸುವದಕ್ಕೆ ತಮ್ಮನ್ನೇ ನೆರೆನಂಬಿ ಅವಲಂಬಿಸಿ ಜೀವಿಸುತ್ತಿರುವವರ ಜೀವನ

ಸಾಗಿಸುವದಕ್ಕಾಗಿ ಬೇರೇನೂ ಉಪಾಯ ಕಾಣದೆ ಅನಿವಾರ್ಯವಾಗಿ ಈ ತಪ್ಪನ್ನು ಮಾಡುತ್ತಿರಬಹುದು. ಅಲ್ಲದೆ ಅವರಿಗೆ ತಾವು ಮಾಡುತ್ತಿರುವದು ತಪ್ಪು ಎಂಬುದು ಗೊತ್ತಾದರೆ ತಮ್ಮ ತಪ್ಪನ್ನು ತಿದ್ದಿಕೊಳ್ಳಲೂ ಅವರು ಪ್ರಯತ್ನಿಸಬಹುದು. ಅವರಿಗೆ ತಮ್ಮ ತಪ್ಪನ್ನು ತಿದ್ದಿಕೊಳ್ಳಲಿಕ್ಕೂ ಕೂಡಾ ಆಸ್ಪದವನ್ನೀಯದೆ ಅವರನ್ನು ಕೊಂದುಹಾಕುವದು ಎಲ್ಲಿಯ ನ್ಯಾಯ?

"ಅವರಿಗೆ ತಾವು ಮಾಡುತ್ತಿರುವದು ತಪ್ಪು ಎಂಬುದು ಗೊತ್ತಿದ್ದರೂ ಅವರು ಅದನ್ನು ಕೈಕೊಂಡಿದ್ದರೆ? ಉಪಾಯವಿಲ್ಲದೇ ಕೈಕೊಂಡಿರಬಹುದು! ಅಲ್ಲದೆ ಅವರಿಗೆ ತಮ್ಮದು ತಪ್ಪು ಎಂದು ತಿಳಿದಿರಲಿಕ್ಕಿಲ್ಲ. ತಿಳಿದರೂ ತಿದ್ದಿಕೊಳ್ಳಲು ಆಸ್ಪದ ಸಿಕ್ಕಿರಲಿಕ್ಕಿಲ್ಲ "ನೀವು ಮಾಡುತ್ತಿರುವದು ತಪ್ಪು" ಎಂದು ಅವರಿಗೆ ಯಾರು ಹೇಳಬೇಕು? ನಾನು ಅವರಿಗೆ ಹೇಳ ಹೊರಟರೆ ಅವರು ನನ್ನನ್ನು ನಂಬುವರೇ? ನಾನು ಹೇಳುವದನ್ನು ತಿಳಿದುಕೊಳ್ಳುವರೇ? ನಾನು ಅವರ ವೈರಿ ಎಂಬುದಿಷ್ಟೇ ಅವರಿಗೆ ಗೊತ್ತು. ನಾನು ಅವರಿಗೆ ಬುದ್ಧಿ ಹೇಳ ಹೊರಟರೆ ನನ್ನನ್ನು ಅವರು ನಂಬುವದೊತ್ತಟ್ಟಿಗಿರಲಿ, ನನ್ನನ್ನೇ ಗುಂಡಿನ ಬಾಯಿಗೆ ಕೊಡದೇ ಇರಲಾರರೇ? ಹಾಗಾದರೆ ಅವರಿಗೆ ಅವರ ತಪ್ಪನ್ನು ತೋರಿಸಿಕೊಡುವ ಮಾರ್ಗವೆ ಇಲ್ಲವೇ? ಅವರನ್ನು ಕೊಂದು ಹಾಕುವದೊಂದೇ ಮಾರ್ಗ? ಛೆ ಹಾಗೇನೂ ಇರಲಿಕ್ಕಿಲ್ಲ. ತಪ್ಪು ಮಾಡಲಿಕ್ಕೆ ಅನೇಕ ಮಾರ್ಗಗಳಿರುವಾಗ ತಪ್ಪನ್ನು ತಿದ್ದಿಕೊಳ್ಳಲಿಕ್ಕೂ ಅನೇಕ ಮಾರ್ಗಗಳಿರಬಹುದು. ಆ ಮಾರ್ಗ ನನಗೆ ಗೊತ್ತಿಲ್ಲವೆಂದ ಮಾತ್ರಕ್ಕೆ ನನಗೆ ಗೊತ್ತಿದ್ದ ಒಂದೇ ಒಂದು ಮಾರ್ಗ, ಅವರನ್ನು ಕೊಂದು ಹಾಕುವದು, ಅದನ್ನೇ ಅನುಸರಿಸಬೇಕೇ? ಛೆ ಛೆ ಇದು ಅಜ್ಞಾನ! ಅನಾಗರಿಕತೆ!! ನಾನು ಇಷ್ಟು ತಿಳಿದುಕೊಂಡೂ ಇಷ್ಟು ವಿಚಾರವಂತನಾಗಿಯು ಆ ಅಜ್ಞಾನಿಗಳು ಅನುಸರಿಸುವ ಮಾರ್ಗವನ್ನೇ ಅನುಸರಿಸಬೇಕೇ? ಬೇಡ; ಬೇಡ. ಸಾವಿರಾರು ಜನರನ್ನು ಈ ಭೂಮಿಯಿಂದ ಒರೆಸಿಹಾಕುವದು; ಸಾವಿರಾರು ಜನರ ಆಶೆ ಆಕಾಂಕ್ಷೆಗಳನ್ನು ಮಣ್ಣುಗೂಡಿಸುವದು ಮಹಾ ಪಾಪ!"

ಈ ಪ್ರಕಾರ ಮೋಹನನು ಇನ್ನೂ ಎಷ್ಟು ಹೊತ್ತಿನವರೆಗೆ ವಿಚಾರ ಮಾಡುತ್ತಾ ಭಾವನಾ ಪರವಶನಾಗಿ ನಿಂತುಕೊಳ್ಳುತ್ತಿದ್ದನೋ ಏನೋ? ಆದರೆ ಅವನ ಕೈಕೆಳಗಿನ ಆ ಹತ್ತು ಜನ ಸೈನಿಕರು ತಮ್ಮ ತಮ್ಮ ಕೆಲಸ

ವನ್ನು ಮುಗಿಸಿ ಅವನೆದುರಿಗೆ ಬಂದು ಸಾಲಾಗಿ ನಿಂತು ಕೊಂಡರು. ಅವರೊಳಗಿನವನೊಬ್ಬನು ಸ್ವಲ್ಪ ಮುಂದೆಬಂದು ಮೋಹನನಿಗೆ "ಜೈ ಹಿಂದ" ಎಂದು ನಮಸ್ಕಾರ ಮಾಡಿದನು. ಮತ್ತು— "ಮದ್ದು ಆದು ಎಲ್ಲವನ್ನೂ ಹಾಕಿ ಸರ್ವ ಸಿದ್ಧತೆಯನ್ನೂ ಮಾಡಲಾಗಿದೆ" ಎಂದು ಹೇಳಿದನು.

ಆಗ ಎಚ್ಚರವಾಯಿತು ಮೋಹನನಿಗೆ ಅವನ ಭಾವ ಸಮಾಧಿಯಿಂದ. ನೋಡುತ್ತಾನೆ—ತನ್ನೆದುರಿಗೆ ನಿಂತಿದ್ದಾರೆ ಹತ್ತು ಜನ ಶೂರ ಸೈನಿಕರು. ತನ್ನ ಆಜ್ಞೆಯನ್ನು ಶಿರಸಾವಹಿಸಲಿಕ್ಕೆ. "ಅವರಿಗೆ ತಮ್ಮದೇ ಆದ ವಿಚಾರ ಸ್ವಲ್ಪೂ ಇಲ್ಲವೇ ಇಲ್ಲವೇನೋ? ತಾನು ಯಾವ ಆಜ್ಞೆ ವಿಧಿಸುತ್ತಾನೋ— ಅದನ್ನು ವ್ಯವಸ್ಥಿತ ರೀತಿಯಲ್ಲಿ ನೆರವೇರಿಸುವದೇ ಅವರ ಮಹಾ ಕರ್ತವ್ಯ. ಯಾವದು ಯೋಗ್ಯ-ಯಾವದು ಅಯೋಗ್ಯ ಎನ್ನುವ ವಿಚಾರವನ್ನೇ ಅವರು ಮಾಡುವದಿಲ್ಲ. ಹೇಳಿದಷ್ಟು ಕೆಲಸವನ್ನು ಮಾಡುವದೇ ಅವರ ಹೊಣೆ. ಆ ಹೊಣೆಯನ್ನು ಯಶಸ್ವಿರೀತಿಯಲ್ಲಿ ನಿರ್ವಹಿಸುವದಕ್ಕಾಗಿ ತಮ್ಮ ಜೀವವನ್ನೇ ಪಣಕ್ಕಿಡುತ್ತಾರೆ. ಆ ಕೆಲಸ ಎಂತಹ ಭಯಾನಕವೇ ಏಕಿರಲೊಲ್ಲದೇಕೆ-ಅದಕ್ಕಾಗಿ ಅವರು ಹಿಂದು ಮುಂದು ನೋಡವದಿಲ್ಲ. ಇಂತಹ ಅಂಧಾನುಕರಣೆಗಳ ಬೆಂಬಲದಿಂದಲೇ ಜಗತ್ತು ಹೀಗಾಗಿದೆಯೋ ಏನೋ? ಇಷ್ಟೇ ಧೃಡ ಮನಸ್ಸಿನಿಂದ ಯೋಗ್ಯಾಯೋಗ್ಯ ವಿಚಾರಮಾಡಿ ಅವರು ಸರ್ವರ ಸುಖಕ್ಕಾಗಿ ಹೆಣಗಿದ್ದರೇ? ಜಗತ್ತು ಇಂದಿನ ಸ್ಥಿತಿಗೆ ಬಂದು ಮುಟ್ಟುತ್ತಿರಲಿಕ್ಕಿಲ್ಲ! ಇವರನ್ನು ಯಾವ ಮಾರ್ಗದಲ್ಲಿಯಾದರೂ ನಡೆಸಬಹುದು. ನಾನು ಒಂದೇ ಒಂದು ಶಬ್ದವನ್ನು ಉಚ್ಚರಿಸಿದರೆ ಸಾಕು- ಸಾವಿರ ಸೈನಿಕರನ್ನು ನೇರವಾಗಿ ಯಮಪುರಿಗಟ್ಟುತ್ತಾರ. ಆದರೆ ಅವರಿಗೆ ಮಾರ್ಗದರ್ಶನ ಮಾಡಬಹುದಾದಂತಹ ಸದವಕಾಶ ನನಗೆ ದೊರೆತಿರುವಾಗ ನಾನೇಕೆ ಇವರನ್ನು ಒಳ್ಳೆಯ ಮಾರ್ಗದಲ್ಲಿ ನಡೆಸಬಾರದು?"

"ಎಲ್ಲವೂ ಕೆಲಸ ಮುಗಿಯಿತೇ?" ಕೇಳಿದ ಮೋಹನ.

"ಮುಗಿಯಿತು."

"ಹಾಗಾದರೆ ನಡೆಯಿರಿನ್ನು ಕ್ಯಾಂಪಿಗೆ ಹೋಗೋಣ"

"ಆದರೆ ಈ ಮುದ್ದಿಗೆ ಬೆಂಕಿಯನ್ನಿಡುವರಾರು? ಗಾಡಿ ಬರಲಿಕ್ಕೆ ೨೦ ನಿಮಿಷಗಳು ಮಾತ್ರ ಉಳಿದಿವೆ"

"ಬೆಂಕಿಯನ್ನು ಯಾರೂ ಇಡಬೇಕಾಗಿಲ್ಲ. ಇಂದು ಈ ಸಂಕ ಹಾರಿಸುವದು ಬೇಡ"

ಆಶ್ಚರ್ಯಗೊಂಡ ಸೈನಿಕನೊಬ್ಬನು ನಡುವೆಯೇ ನುಡಿದ

"ಆರು ಘಂಟೆಗೆ ಈ ಪೂಲನ್ನು ಕಾಯುವದಕ್ಕಾಗಿ ಮತ್ತೆ ಅನೇಕ ಸೈನಿಕರು ಬರುತ್ತಾರೆ. ಮುದ್ದ ತುಂಬಿದ್ದನ್ನು ಕಂಡು ಹಿಡಿಯಲಿಕ್ಕೆ ಅವರಿಗೆ ಹೆಚ್ಚು ಹೊತ್ತು ಹಿಡಿಯಲಾರದು. ಆ ಮೇಲೆ ಈ ಪೂಲು ಕೆಡಿಸುವದು ಬಹಳ ದುಸ್ತರವಾಗುವದು"

"ಅದು ಎಲ್ಲ ನನಗೆ ಗೊತ್ತಿದೆ. ನಾನು ಹೇಳುವ ಮಾತನ್ನು ನೀವು ಕೇಳುವಂತಿದ್ದರೆ, ಸುಮ್ಮನೆ ನನ್ನ ಬೆನ್ನುಹತ್ತಿ ಕ್ಯಾಂಪಿಗೆ ನಡೆಯಿರಿ" ಎಂದ ಮೋಹನ ಅಚಲವಾದ ನಿರ್ಧಾರದಿಂದ.

ಆ ಸೈನಿಕರಿಗೆಲ್ಲ ಅತೀವ ನಿರಾಶೆಯಾಯಿತು. ಅಂತಹ ಛಳಿಯಲ್ಲಿ, ಅಂತಹ ಭಯಾನಕ ರಾತ್ರಿಯಲ್ಲಿ ಅವರು ತಮ್ಮ ಜೀವದ ಹಂಗುದೊರೆದು ಕೇವಲ ಕರ್ತವ್ಯ, ರಾಷ್ಟ್ರಾಭಿಮಾನದ ಭಾವನೆಯಿಂದ ನಾಲ್ಕೈದು ತಾಸುಗಳ ವರೆಗೆ ಶ್ರಮ ಪಟ್ಟಿದ್ದಾರೆ. ಅವರು ತಮ್ಮ ಈ ಶ್ರಮಕ್ಕೆ ಪ್ರತಿಫಲವಾಗಿ ಬೇಡುತ್ತಿರುವದೇನು ? ಮದ್ಯವಲ್ಲ, ಹೊನ್ನಲ್ಲ, ಹೆಣ್ಣಲ್ಲ, ಕೇವಲ ತಮ್ಮ ವೈರಿಗಳ ಮರಣ! ಪ್ರತಿದಿನ ಸುಸಜ್ಜಿತ ಸಾವಿರಾರು ಸೈನಿಕರನ್ನು ತಮ್ಮೆದುರಿಗೇ ತಂದುಬಿಟ್ಟು, ತಮ್ಮ ಹಳ್ಳಿಗರನ್ನು, ತಮ್ಮ ಸಹೋದರರನ್ನು ಸಾವು ನೋವುಗಳಿಗೆ ಈಡು ಮಾಡುತ್ತಿರುವ ಈ ಹಾಳು ರೇಲು–ಈ ರೇಲಿನ ನಾಶ! ಪೂಲನ್ನು ಕೆಡವಿಬಿಟ್ಟರೆ ರೇಲುಗಳ ಓಡಾಟ ತನ್ನಿಂದ ತಾನೇ ನಿಂತು ಹೋಗುವದು. ಈಗ ತಾವು ಎದುರಿಸಬೇಕಾಗಿರುವ ಸೈನಿಕರಿಗೆ ಅನ್ನ, ಶಸ್ತ್ರಾಸ್ತ್ರ ಮೊದಲಾದ ಸಾಮುಗ್ರಿಗಳ ಪೂರೈಕೆಯೂ ನಿಂತು ಹೋಗುವದು. ಆಗ ನಿರ್ವಾಹವಿಲ್ಲದೆ. ಈಗ ತಮ್ಮನ್ನೆದುರಿಸುತ್ತಿರುವ ಸೈನಿಕರು ತಮಗೆ ಶರಣಾಗತರಾಗುವರು. ತಮ್ಮ ವಿಜಯ ಪತಾಕೆಯು, ಎತ್ತರದಲಿ ಗಗನ ಮಂಡಲದಲಿ ನವಚೈತನ್ಯದಿಂದ ಹಾರುವದು. ಈ ಸುದ್ದಿಯು ಕ್ಷಣಾರ್ಧದಲ್ಲಿಯೇ ಸುತ್ತೆಲ್ಲ ಹಬ್ಬಿ ವೈರಿಗಳ ಎದೆ ನಡುಗುವಂತೆ ಮಾಡದೇ ಇರಲಾರದು. ಆಗ ಅವರೂ ನಿರ್ವಾಹವಿಲ್ಲದೆ ಸೋಲನ್ನೊಪ್ಪಿಕೊಳ್ಳಬೇಕಾಗುವದು.

"ಆದರೆ ಇದೆಲ್ಲಕ್ಕೂ ಈ ನಮ್ಮ ನಾಯಕ ನೀರೆರಚುತ್ತಿರುವನು. ನಾವು ಈವರೆಗೆ ಪಟ್ಟ ಶ್ರಮವೆಲ್ಲವನ್ನೂ ವ್ಯರ್ಥಮಾಡುತ್ತಿರುವನು. ಅಲ್ಲದೆ ಮೊದಲಿನಂತೆಯೇ ಪ್ರತಿದಿನ ಸಾವಿರಾರು ನಮ್ಮ ಸಹೋದರರು ಸಾವು-ನೋವಿಗೆ ಈಡಾಗುವದಕ್ಕೆ ಮಾರ್ಗ ಮಾಡಿಕೊಡುತ್ತಿರುವನು. ಇವನು ಹುಚ್ಚನಿರಬಹುದೇ? ಅಥವಾ ವೈರಿಪಕ್ಷದವರು ಇವನನ್ನು ಒಡೆದುಕೊಂಡಿರುವರೋ? ಅಥವಾ ಕೈಲಾಗದ ಅಂಜುಬುರಕ - ಹೇಡಿ ಇರುವನೋ? ಇವನ ಆಜ್ಞೆಯನ್ನು ಮೀರಿಯಾದರೂ ನಾವು ನಮ್ಮ ಕರ್ತವ್ಯವನ್ನು ಮಾಡೋಣವೇ? ಆದರೆ ಅದು ಯೋಗ್ಯವಾಗಲಾರದು. ನಮ್ಮ ನಾಯಕನ ಮಾತನ್ನು ನಾವೇ ಕೇಳದಿದ್ದರೆ ನಮ್ಮಲ್ಲಿ ಯಾವ ಶಿಸ್ತು, ಸಂಘಟನೆಗಳೂ ಉಳಿಯಲಾರವು. ನಮ್ಮಂತೆ ಉಳಿದ ಸೈನಿಕರೂ ತಮ್ಮ ನಾಯಕನ ಮಾತು ಕೇಳುವದನ್ನು ನಿಲ್ಲಿಸಿಬಿಟ್ಟರೆ? ನಮ್ಮನ್ನು ಜಯಿಸಲಿಕ್ಕೆ ನಮ್ಮ ವೈರಿಗಳಿಗೆ ಒಂದು ಕ್ಷಣ ಕೂಡಾ ಹತ್ತಲಿಕ್ಕಿಲ್ಲ. ನಮ್ಮ ನಾಯಕನ ಮಾತನ್ನು ಕೇಳುವದೇ ನಮ್ಮ ಮೊದಲನೆಯ ಕರ್ತವ್ಯ! ಅಲ್ಲದೆ ಇವನು ತಪ್ಪು ಮಾಡುತ್ತಿದ್ದರೆ, ಇವನನ್ನು ಇವನ ಮೇಲಿನವರು ಹೇಗೂ ಶಿಕ್ಷೆಗೊಳಮಾಡುವರಲ್ಲ!"

ಮೋಹನನು ಮೌನವಾಗಿಯೇ ಮುಂದೆ ಸಾಗಿದನು. ಉಳಿದ ಹತ್ತು ಜನ ಸೈನಿಕರೂ ನಿರ್ವಾಹವಿಲ್ಲದೆ ಅವನನ್ನು ಹಿಂಬಾಲಿಸಿದರು. ಇವರು ಇನ್ನೂ ಅರ್ಧ ಫರ್ಲಾಂಗು ಕೂಡಾ ಹೋಗಿರಲಿಲ್ಲ. ಇವರನ್ನು ಇಂತಹ ಮಹತ್ವದ ಕೆಲಸಕ್ಕೆ ನಿಯಮಿಸಿದ ಕರ್ನಲ್‌ಸಾಹೇಬರೇ ಸ್ವತಃ ಅವರ ಕಾರ್ಯವನ್ನು ನಿರೀಕ್ಷಿಸಲೆಂದು ಅಲ್ಲಿಗೆ ಬಂದರು. ಮೋಹನನು ತನ್ನ ಮೇಲಿನ ಅಧಿಕಾರಿಗಳಿಗೆ ಸ್ಯಾಲ್ಯೂಟ ಹೊಡೆದು ನಿಂತುಕೊಂಡನು.

"ಗಾಡಿಯು ಆಗಲೇ ಬಂದಾಯಿತೇ?" ಆಶ್ಚರ್ಯದಿಂದ ಕೇಳಿದರು ಕರ್ನಲ್ ಸಾಹೇಬರು ತಮ್ಮ ಕೈಯೊಳಗಿನ ಗಡಿಯಾರವನ್ನು ನೋಡುತ್ತ. ಅವರ ಗಡಿಯಾರದ ಪ್ರಕಾರ ಗಾಡಿ ಬರಲಿಕ್ಕೆ ಇನ್ನೂ ಹತ್ತು ನಿಮಿಷಗಳಿದ್ದವು. ಆದರೆ ಅದು ಬಂದು ಬಿದ್ದು, ತಾವು ವೇಳೆಯನ್ನು ತಪ್ಪು ತಿಳಿದುಕೊಂಡಿರುವರೋ ಏನೋ–ಎಂದು ಅವರಿಗೆ ಸಂಶಯ.

"ಗಾಡಿ ಇನ್ನೂ ಬಂದಿಲ್ಲ" ಮೋಹನ ಅವರ ಸಂಶಯ ನಿವಾರಿಸಿದ.

" ಹಾಗಾದರೆ ನೀವು ತಿರುಗಿ ಏಕೆ ಬಂದಿರಿ ? " ಮತ್ತಿಷ್ಟು ಆಶ್ಚರ್ಯ ದಿಂದ ಕೇಳಿದರು ಸಾಹೇಬರು.

ಅವರಿಗೆ ಏನು ಉತ್ತರ ಕೊಡಬೇಕೆಂಬುದೇ ಮೋಹನನಿಗೆ ತಿಳಿಯು ಲಿಲ್ಲ. ಕರ್ನಲ್ ಸಾಹೇಬರ ಈ ಪ್ರಶ್ನೆಗೆ ತಾನು ಉತ್ತರ ಕೊಡಬೇಕಾಗುವ ದೆಂಬುದನ್ನು ಅವನು ವಿಚಾರಿಸಿಯೇ ಇರಲಿಲ್ಲ. ಈ ಪ್ರಶ್ನೆಯನ್ನು ತನಗೆ ಕೇಳುವ ಅಧಿಕಾರ ಉಳ್ಳವರೂ ಒಬ್ಬರಿದ್ದಾರೆ; ಎಂಬ ವಿಚಾರ ಕೂಡಾ ಅವ ನಲ್ಲಿ ಬಂದಿರಲಿಲ್ಲ. ಅವನು ತನ್ನ ಮಾನವೀಯತೆಯ ಮಹಾ ತತ್ವದಲ್ಲಿಯೇ ಮಗ್ನನಾಗಿದ್ದನು.

ಮೋಹನನು ಏನೂ ಉತ್ತರ ಕೊಡದೆ ಸುಮ್ಮನೇ ಕೆಳಗೆ ಮುಖಮಾಡಿ ಕೊಂಡು ನಿಂತಿರುವದನ್ನು ಕಂಡು ಸಾಹೇಬರಿಗೆ ಸಿಟ್ಟುಬಂದಿತು.

"ಯಾಕೆ ಮೋಹನ ಉತ್ತರ ಕೊಡಲೊಲ್ಲಿ?" ಸ್ವಲ್ಪ ಕಠೋರವಾಗಿಯೇ ಕೇಳಿದರು ಸಾಹೇಬರು.

ಮೋಹನನು ಸುಮ್ಮನೇ ಉಳಿದನು

ಉಳಿದ ಸೈನಿಕರಲ್ಲೊಬ್ಬನಿಂದ ಎಲ್ಲ ವಿಷಯವನ್ನೂ ತಿಳಿದುಕೊಂಡ ಮೇಲಂತೂ ಸಾಹೇಬರ ಕೋಪ ವಿಕೋಪಕ್ಕೆ ಹೋಯಿತು. ಅದೇ ಕಾವಿನ ಲ್ಲಿಯೇ ಅವರು ಒದರಾಡಹತ್ತಿದರು.

"ಮೋಹನ, ನೀನು ಅಳ್ಳೆದೆಯವ–ಅಂಜುಬುರು–ಕಹೇಡಿ ಇರುವಿ ಎಂದು ನಾನು ತಿಳಿದುಕೊಂಡಿರಲಿಲ್ಲ. ಆದರೆ ನಿನ್ನ ಬಣ್ಣವನ್ನು ನೀನೇ ಬಯಲು ಮಾಡಿದಿ. ನಿನ್ನಂತಹ ಹೇಡಿ ಈ ಜಗತ್ತಿನಲ್ಲಿ ಜೀವಿಸಿದ್ದು ಏನೂ ಉಪಯೋಗವಿಲ್ಲ. ಅಲ್ಲದೆ ನಿನ್ನಂಥವರು ಜಿವಿಸಿರುವದರಿಂದ ದೇಶಕ್ಕೆ ಮತ್ತಿಷ್ಟು ಹಾನಿ. ನೀನು ಇಷ್ಟು ಓದಿದವ, ಉಚ್ಚ ಸಿಕ್ಷಣ ಪಡೆದವ ಉಜ್ವಲ ದೇಶಾಭಿಮಾನ ಉಳ್ಳವ; ಎಂದು ನಾನು ಇಲ್ಲಿಯವರೆಗೆ ತಿಳಿದು ಕೊಂಡಿದ್ದೆ ಅದಕ್ಕೆಂದೇ ಇಂತಹ ಮಹತ್ವದ ಕೆಲಸಕ್ಕೆ ನಿನ್ನನ್ನು ನಿಯಮಿಸಿದ್ದೆ. ಆದರೆ ನೀನು ನನಗೆ ಅತೀವ ನಿರಾಶೆಯನ್ನುಂಟುಮಾಡಿರುವಿ. ನಿನ್ನನ್ನು ಈಗಲೇ ಗುಂಡು ಹೊಡೆದು ಸುಟ್ಟು ಹಾಕುವಷ್ಟು ಸಿಟ್ಟು ನನಗೆ ಬಂದಿದೆ.

"ನೀನು ಹೆಣ್ಣಾಗಿಯಾದರೂ ಹುಟ್ಟಬಾರದಾಗಿತ್ತೇ? ಒಳ್ಳೇ ದೇಶಾಭಿ ಮಾನದ ಕಾರ್ಯ ಮಾಡಿದ ಒಬ್ಬ ಶೂರ ಸೈನಿಕನಿಗೆ ಒಂದು ರಾತ್ರಿಯಾ

ದರೂ ನೀನು ಉಪಯೋಗ ಬೀಳಬಹುದಾಗಿತ್ತು. ಆದರೆ ನೀನು ಪುರುಷ ನಾಗಿ ಹುಟ್ಟಿ ಪುರುಷರ ಕುಲಕ್ಕೇ ಕಲಂಕವನ್ನು ತಂದಿರುವಿ. ತೀವ್ರ ನನ್ನ ದೃಷ್ಟಿಯಿಂದ ದೂರಾಗು–ಸಿಟ್ಟಿನ ಭರದಲ್ಲಿ ನಾನು ನಿನ್ನನ್ನು ಕೊಂದು ಹಾಕ ಬಹುದು. ಥೂ–ಹೇಡಿ, ತೊಲಗಾಚೆ. ಎಲ್ಲಿಯಾದರೂ ತಲೆ ಮರೆಸಿಕೊಂಡಿರು ಇನ್ನೊಮ್ಮೆ ನನ್ನ ದೃಷ್ಟಿಗೂ ಕೂಡಾ ಬೀಳಬೇಡ. ನಿನ್ನಂತಹ ಹೇಡಿಗಳು...." ಎಂದು ಇನ್ನೂ ಎಷ್ಟು ಹೊತ್ತಿನವರೆಗೆ ಸಾಹೇಬರು ಒದರಾಡುತ್ತಿದ್ದರೋ ಎನೋ–ಅದರೆ "ಗಾಡಿಯು ಬರುತ್ತಿರುವ ಸಪ್ಪಳ ಕೇಳಿಸ ಹತ್ತಿತು" ಎಂದೊಬ್ಬ ಸೈನಿಕ ಎಚ್ಚರಿಸಿದ. ಸಾಹೇಬರು ಕೂಡಲೇ ತಮ್ಮ ಬೈಗಳ ಸುರಿ ಮಳೆಯನ್ನು ನಿಲ್ಲಿಸಿದರು.

"ತೀವ್ರ ನಡೆಯಿರಿ ಓಡುತ್ತಾ—ಪೂಲಿನ ಹತ್ತಿರ. ಗಾಡಿಯು ಸಂಪೂ ರ್ಣವಾಗಿ ಫೂಲಿನ ಮೇಲಿದ್ದಾಗ ನಾನು ಸೀಟಿ ಹೊಡೆಯುತ್ತೇನೆ. ಕೂಡಲೆ ಮದ್ದಿಗೆ ಬೆಂಕಿ ಹಚ್ಚಬೇಕು" ಎಂದು ಅಜ್ಞೆ ವಿಧಿಸಿದರು ಸಾಹೇಬರು ಸೈನಿಕ ರಿಗೆ.

ಸೈನಿಕರು ಫೂಲಿನ ಕಡೆಗೆ ತೀವ್ರ ಗತಿಯಿಂದ ಓಡಿದರು. ಸಾಹೇಬರು ಮೋಹನನ ಮುಖದ ಮೇಲೆ,

"ಥೂSS" ಎಂದು ಉಗುಳಿ ಫೂಲಿನ ಕಡೆಗೆ ಸಾಗಿದರು

ಮೋಹನನು ತನ್ನ ಸೈನ್ಯ ಕೇಂದ್ರದಿಂದ ತಿರುಗಿ ತನ್ನ ಹಳ್ಳಿಗೆ ಬರು ವದರೊಳಗಾಗಿಯೇ ಅವನ ಕಥೆಯು ಹಳ್ಳಿಯಲ್ಲೆಲ್ಲ ಮನೆ ಮನೆಯ ಮಾತಾಗಿತ್ತು. ಹಳ್ಳಿಯಲ್ಲೆಲ್ಲ ಸಾಮಾನ್ಯವಾಗಿ ಎಲ್ಲರೂ ಅವನ ಗುರುತಿ ನವರೇ ಇದ್ದರು. ಒಬ್ಬರೂ ಸಹ ಅವನನ್ನು ಸ್ವಾಗತಿಸಲಿಕ್ಕೆ ಮುಂದೆ ಬರ ಲಿಲ್ಲ. ಎಲ್ಲರೂ ಬಾಗಿಲದಮುಂದೆ, ಇಲ್ಲವೇ ಕಿಡಿಕಿಯ ಹತ್ತಿರ ನಿಂತುಕೊಂಡು ತಿರಸ್ಕಾರದಿಂದ ಇವನನ್ನೇ ನೋಡುತ್ತಿದ್ದರು. "ಛೀ" ಎಂದವರೆಷ್ಟೋ "ಥೂ" ಅಂದವರಷ್ಟೋ! ಕೆಲವು ಹುಡುಗರಂತೂ "ಹೇಡಿ ಹೆಣ್ಣು" ಎನ್ನುತ್ತಾ ಇವನ ಮೇಲೆಯೇ "ಥೂSS" ಎಂದು ಉಗುಳುತ್ತಾ ಇವನ ಬೆನ್ನು ಹತ್ತಿದರು. ಅದರಲ್ಲಿಯೇ ಕೆಲವು ತುಂಟ ಹುಡುಗರು ಅವನು ತೊಟ್ಟ ಅಂಗಿಯನ್ನು ಜಗ್ಗಿ ಹರಿಯಲಿಕ್ಕೂ ಕೂಡಾ ಹಿಂದು ಮುಂದು ನೋಡಲಿಲ್ಲ.

ಕೆದರಿದ ತಲೆ, ಹರುಕ ಅಂಗಿ, ಚೊಣ್ಣ, ನಿರಾಶೆ, ನಿರುತ್ಸಾಹ, ಅಪಜಯ, ಅಪಮಾನಗಳಿಂದ ತುಂಬಿದ ಅವನ ಒಣಮುಖ–ಇವೆಲ್ಲವೂ ಅವನು ಹುಚ್ಚ ಎಂದು ತೋರಿಸಿಕೊಡಲಿಕ್ಕೆ ಬಹಳ ಹೊತ್ತು ಹಿಡಿಯಲಿಲ್ಲ. ಇದನ್ನು ಸಣ್ಣ ಸಣ್ಣ ಹುಡುಗರೇ ಮೊದಲು ಕಂಡು ಹಿಡಿದರು. ಅದಕ್ಕೆಂದೇ ಅವರು ತಾವು ಕಂಡುಹಿಡಿದ ಆ ಮಹತ್ವದ ಸಂಗತಿಯನ್ನು ಪ್ರಕಟಗೊಳಿಸಲಿಕ್ಕೆಂದು ಅವನೆಡೆಗೆ ಕಲ್ಲು ತೂರಹತ್ತಿದರು. ಕಲ್ಲುಗಳ ಹೊಡೆತಕ್ಕೆ ಅವನ ತಲೆ ಒಡೆದು ರಕ್ತ ಸೋರ ಹತ್ತಿತು. ಮುಖದ ಮೇಲೆ ಮತ್ತು ಅವನ ಶರೀರದ ಮೇಲೆ ಅನೇಕ ಕಡೆಗೆ ತೀವ್ರ ಘಾಯಗಳಾದವು. ಕಳೆದ ಮೂರು ದಿನಗಳಿಂದಲೂ ಯಾರೂ ಅವನಿಗೆ ಒಂದು ಚೂರು ರೊಟ್ಟಿಯನ್ನು ಕೂಡಾ ಕೊಟ್ಟಿರಲಿಲ್ಲ. ಒಂದು ಸವಿಮಾತನ್ನು ಆಡಿರಲಿಲ್ಲ. ಅದಷ್ಟಕ್ಕೇ ಸಾಲದೆಂದು ತಮತಮಗೆ ಗೊತ್ತಿದ್ದ ಎಲ್ಲ ರೀತಿಯಿಂದಲೂ ಹಿಂಸೆ ಮಾಡಿದ್ದರು. ಮುಖದ ಮೇಲೆ ಉಗುಳಿದ್ದರು. ಹುಚ್ಚನೆಂದು ಕಲ್ಲುತೂರಿದ್ದರು. ಊರೊಳಗಿನ ನಾಯಿಗಳು ಸಹ ಅವನಿಗೆ ಗಂಟುಬೀಳಬೇಕೇ?

ಮೋಹನನು ಇದಾವುದರ ಕಡೆಗೆ ಲಕ್ಷ್ಯಕೊಡದೆ ಮನೆಯ ಕಡೆಗೆ ಸಾಗಿದ್ದನು. ಮನೆಯ ಎದುರಿಗೇ ಬಂದು ನಿಂತುಕೊಂಡನು. ಮನೆಯ ಬಾಗಿಲಲ್ಲಿ ನಿಂತುಕೊಂಡಿದ್ದ ಅವನ ಪ್ರೀತಿಯ ತಾಯಿ, ಪ್ರೇಮದ ಹೆಂಡತಿ- ಶಾಂತಿ ಇವರ ಮುಖದಲ್ಲಿಯೂ ಅವನಬಗ್ಗೆ ತಿರಸ್ಕಾರವೇ? ಶಾಂತಿಯಂತೂ ಒಮ್ಮೆ ಮೋಹನನ ಮುಖದಮೇಲೆ ಉಗುಳುವಳೇನೋ ಎಂಬಂತೆ ಅವನೆಡೆಗೆ ತಿರಸ್ಕಾರದಿಂದ ನೋಡಿ ಮುಖವನ್ನು ತಿರುವಿಕೊಂಡು ಒಳಗೆ ಹೊರಟು ಹೋದಳು. ತಾಯಿಯಾದರೂ ಅವನ ಬಗ್ಗೆ ಒಂದೂ ಪ್ರೇಮದ ನುಡಿಯನ್ನಾಡದೆ ನಿಂತುಕೊಂಡಿದ್ದಳು. ಇದನ್ನು ಕಂಡಮೇಲೆ ಮೋಹನನ ತಲೆಯಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತೋ ಏನೋ? ಅವನು ಕುಪ್ಪರಿಸಿಕೊಂಡು ನೆಲಕ್ಕೆ ಬಿದ್ದನು. ಪ್ರಜ್ಞೆ ಹಾರಿತು.

ಹೆಂಡತಿಯೂ ಮತ್ತು ತಾಯಿಯೂ ನಿರ್ವಾಹವಿಲ್ಲದೆ ಮೋಹನನ್ನು ಎತ್ತಿಕೊಂಡು ಒಳಗೆ ಒಯ್ದರು. ಅವನ ತಾಯಿಯು ಅವನ ಘಾಯಗಳನ್ನೆಲ್ಲ ತೊಳೆದು ಕಟ್ಟಿದಳು. ಬೇರೆ ಅರಿವೆಗಳನ್ನು ತೊಡಿಸಿ ಮೆತ್ತನ್ನ ಹಾಸಿಗೆಯ ಮೇಲೆ ಮಲಗಿಸಿ ಉಪಚರಿಸಿದಳು. ಹೆಂಡತಿ ಮಾತ್ರ ಅವನ ಸಮೀಪಕ್ಕೆ

ಕೂಡಾ ಬರಲಿಲ್ಲ. ದೂರದಲ್ಲಿಯೇ ತಿರಸ್ಕಾರ ದೃಷ್ಟಿಯಿಂದ ಅವನನ್ನು ನುಂಗಲೇನೋ ಎಂಬ ಸಿಟ್ಟಿನಿಂದ ನೋಡುತ್ತಾ ನಿಂತುಕೊಳ್ಳುತ್ತಿದ್ದಳು.

ಮೋಹನನಿಗೆ ಪ್ರಜ್ಞೆ ಬರುವದರಲ್ಲಿಯೆ ನಾಲ್ಕೈದು ದಿನಗಳು ಕಳೆದವು. ಆದರೂ ಅವನಿಗೆ ಮೇಲಕ್ಕೇಳಲು ಆಗುತ್ತಿರಲಿಲ್ಲ. ಕಾಲು ಕೈ, ಮೊದಲಾದ ಅಂಗಾಂಗಗಳ ಮೇಲಿನ ಅವನ ಪ್ರಭುತ್ವವೇ ಇಲ್ಲದಂತಾಗಿತ್ತು. ಅವನ ತಾಯಿಯೇ ಅವನಿಗೆ ಊಟಮಾಡಿಸುತ್ತಿದ್ದಳು. ಶಾಂತಿ ಮಾತ್ರ ಯಾವಾಗಲೂ ಅವನಿಂದ ದೂರದಲ್ಲಿಯೇ ಇರುತ್ತಿದ್ದಳು. ಹೆಚ್ಚಾಗಿ ಅವನ ದೃಷ್ಟಿಗೆ ಬೀಳುತ್ತಿರಲಿಲ್ಲ. ಅವಳು ಸಮೀಪಕ್ಕೆ ಒಂದರೂ ಆವಳ ಉರಿಯುವ ಕಣ್ಣುಗಳನ್ನು ಯದುರಿಸುವ ಸಾಹಸು ಮಾಡುವಷ್ಟು ಶಕ್ತಿಯೂ ಮೋಹನನಲ್ಲಿರಲಿಲ್ಲ. "ನನ್ನನ್ನು ಹಡೆದು ಜೋಪಾನ ಮಾಡಿ ಬೆಳೆಸಿ ದೊಡ್ಡವನನ್ನಾಗಿ ಮಾಡಿದ ತಾಯಿಯೇ ನನ್ನನ್ನು ತಿರಸ್ಕಾರದಿಂದ ನೋಡುತ್ತಾ, ಹಡೆದ ತಪ್ಪಿಗಾಗಿ ನಿರ್ವಾಹ ವಿಲ್ಲದೆ ನನ್ನ ಉಪಚಾರವನ್ನುಮಾಡಬೇಕೆಂದು ಮಾಡುತ್ತಿರುವಾಗ ನನ್ನ ಹೆಂಡತಿ ನನ್ನನ್ನೆಷ್ಟು ತಿರಸ್ಕರಿಸುತ್ತಿರಬಹುದು? ನನ್ನನ್ನೆಷ್ಟು ಶಪಿಸುತ್ತಿರಬಹುದು? ಅವಳಾದರೂ ಏನು ಮಾಡಿಯಾಳು? ನನ್ನ ಸಲುವಾಗಿ ನೆರೆಹೊರೆಯವರಿಂದ ಅವಳೆಷ್ಟು ತಿರಸ್ಕಾರ ಅವಮಾನಗಳನ್ನು ಅನುಭವಿಸಬೇಕಾಗಿದೆಯೋ ಎನೋ? ಆದರೆ ಅವಳೇಕೆ ನನ್ನನ್ನು ತಿಳಿದುಕೊಳ್ಳಲು ಪ್ರಯತ್ನಿಸಬಾರದು? ನಾನು ನನ್ನ ಜೀವಮಾನವನ್ನೆಲ್ಲ ಹೀಗೆಯೇ ಕಳೆಯಬೇಕೇ"? ಎಂದು ತನ್ನಷ್ಟಕ್ಕೆ ತಾನೇ ಪ್ರಶ್ನಿಸಿಕೊಳ್ಳುತ್ತಿದ್ದ ಮೋಹನ.

ಸುಮಾರು ಹದಿನೈದು ದಿನಗಳ ನಂತರ ಒಂದು ದಿನ ಸಂಜೆ ಮೋಹನನ ತಾಯಿಯು ತನ್ನೆಲ್ಲ ಕೆಲಸವನ್ನೂ ಮುಗಿಸಿ ಮನೆಯಿಂದ ಹೊರಗೆ ಹೋಗಿದ್ದಳು. ಶಾಂತಿ ಮಾತ್ರ ಅಡುಗೆಮನೆಯಲ್ಲಿ ಯಾವದೋ ಕೆಲಸದಲ್ಲಿ ತೊಡಗಿದ್ದಳು. ಹದಿನೈದು ದಿನಗಳವರೆಗೂ ಸಂಪೂರ್ಣವಾಗಿ ಮೌನವನ್ನು ತಾಳಿದ ಮೋಹನನು, "ಶಾಂತಿ" ಎಂದು ಹೆಂಡತಿಯನ್ನು ಒದರಿದ.

ಶಾಂತಿಗೆ ಅದು ಕೇಳಿಸಿದರೂ ಕೇಳದವಳಂತೆಯೇ ತನ್ನ ಕೆಲಸವನ್ನು ಮುಂದುವರಿಸಿದಳು. ಅಡುಗೆ ಮನೆಬಿಟ್ಟು ಹೊರಬರಲಿಲ್ಲ.

"ಶಾಂತೀಽಽ" ಎಂದು ಜೋರಾಗಿಯೇ ಒದರಿದ ಮೋಹನ ಮತ್ತೊಮ್ಮೆ.

“ ಯಾಕs ಎನ ಕೆಲಸ್ಯತಿ? ಯಾಕ ಕೂಗಿಕೊಳ್ಳಾಕ ಹತ್ತೀರಿ ಮನೀ ಹಾರಿಬೀಳೂವಂಗ?” ಎಂದು ತಿರಸ್ಕಾರದಿಂದ ಮಾತಾಡುತ್ತಲೇ ಹೊರ ಬಂದಳು ಶಾಂತಿ.

ಎಂದೂ ಈ ರೀತಿ ಮಾತಾಡದ ಶಾಂತಿಯು ಈ ರೀತಿ ಮಾತಾಡು ತ್ತಿರುವದನ್ನು ಕಂಡು ಮೋಹನನಿಗೆ ಹುಚ್ಚೇ ಹಿಡಿದಂತಾಯಿತು. ತನ್ನ ಪ್ರೀತಿಯ ಶಾಂತಿ, ಪ್ರೇಮದ ಪುತ್ಥಳಿ, ತನ್ನನ್ನೇ ದೇವರೆಂದು ಬಗೆದು ಪೂಜಿಸು ತ್ತಿದ್ದ ಗೃಹಲಕ್ಷ್ಮಿ ತನ್ನ ಒಂದೇ ಒಂದು ಪ್ರೇಮದ ನುಡಿಗಾಗಿ ಹಗಲಿರುಳು ತನ್ನನ್ನೇ ಸೇವಿಸುತ್ತಿದ್ದ ಶಾಂತಿ ತನ್ನನ್ನೇ ಈ ಪ್ರಕಾರ ಹೀಗಳೆಯುತ್ತಿರುವ ದನ್ನು ಕಂಡು ಮೋಹನನ ಹೊಟ್ಟೆಯಲ್ಲಿ ಬೆಂಕಿ ಸುರುವಿದಂತಾಯಿತು. ಆದರೂ ಅದನ್ನು ತೋರಗೊಡದೆ

“ ಶಾಂತಿ–ಬಾ ಇಲ್ಲೆ ” ಎಂದನು ಸೌಮ್ಯವಾಗಿ.

“ ಯಾಕ? ಕೆಲಸ್ದಾಗ ಅದೇನಿ ಅನ್ನೂದು ಕಾಣಸ್ತೈತ್ಯೊ ಇಲ್ಲೋ ?”

ಮೋಹನನಿಗೆ ಏನು ಮಾಡಬೇಕೆಂಬುದು ತಿಳಿಯದಾಯಿತು. ಆದರೂ ಸಹ ತನ್ನ ಸಹನೆಯನ್ನೆಲ್ಲ ಕೇಂದ್ರೀಕರಿಸಿ,

“ ಇಲ್ಲೆ ಸ್ವಲ್ಪ ಬಾ–ನಿನಗೊಂದು ಮಾತು ಹೇಳತೇನಿ ” ಎಂದನು.

ಆದರೆ ಇದೆಲ್ಲದರ ಕಡೆಗೆ ಶಾಂತಿಯು ಲಕ್ಷ್ಯವಿರಲಿಲ್ಲ. ಅವಳು ತನ್ನ ಬಿಗುವಿನಲ್ಲಿಯೇ ಇದ್ದಳು. ಅದೇ ತುಚ್ಛವಾದ ಸ್ವರದಲ್ಲಿ ಮಾತಿಗೆ ಪ್ರಾರಂಭಿಸಿದಳು. ತನ್ನ ಹೊಟ್ಟೆಯಲ್ಲಿದ್ದುದನ್ನೆಲ್ಲ ಕಾರಿಕೊಂಡಳು.

“ ಏನದು ಮಾತು? ಯಾವ ಮಾತು ಹೇಳಬೇಕಾಗೇತಿ ನಿಮಗ? ಯಾವ ಯುದ್ಧಾ ಗೆದ್ದ ಬಂದ ಸುದ್ದೀ ಹೇಳ್ಳಿಕ್ಕೆ ಕರೀತೀರಿ? ಯುದ್ಧಕ್ಕ ಹೆದರಿ ಜೀವ ಉಳಿಸಿಕೊಳ್ಳುವದರ ಸಲುವಾಗಿ ಹೇಡಿಯಂಗ ಓಡಿಬಂದ ಸುದ್ದಿ ಹೇಳ್ಳಿಕ್ಕೆ ಕರೀತಿರೇನು? ಎನು ಮುಂದೀ ಕಡಿಂದ “ ಛೀ ” ‘ ಥೂ ” ಅಂಥ ಉಗಳಿಸಿಕೊಂಡದ್ದನ್ನ ಹೇಳ್ಳಿಕ್ಕೆ ಕರೀತಿರೋ? ನಾಚಿಕೆ ಆದರೂ ಹ್ಯಾಂಗ ಬರಲಿಲ್ಲ ನಿಮಗ ಹಿಂಗ ಹೆಂಗಸೂರಂಗ ಹೆದರಿ ಓಡಿಬರಲಿಕ್ಕೆ? ಗಂಡಸಾಗಿ ಮೀಸೆ ಹೊತ್ತು ಈ ಭೂಮಿಮ್ಯಾಲೆ ಯಾಕ ಜೀವಿಸಬೇಕ? ಬಳಿ ಇಟ್ಟು ಕೊಂಡು ಒಲಿಮುಂದ ಕುಂದ್ರಬಾರದ? ಹೆಂಗಸು–ನಾನು–ನನ್ನಂಥಕಿಗೆ ಇಷ್ಟು ಹೊಟ್ಟೆ ಉರಿತೈತಿ–ನೀವು ಇಷ್ಟು ಅನಿಸಿಕೊಂಡೂ ಹ್ಯಾಂಗ ಬದುಕಿ

ಅದಿರೋ ಏನೊ? ನೀವೊಬ್ಬರು ಮುಂದೀ ಕಡಿಯಿಂದ ಉಗುಳಿಸಿಕೊಂಡಿದ್ದಲ್ಲದ ನಾವು ಸತೇಕ ಮುಂದೀ ಮುಂದ ಮುಖ ಎತ್ತದಂಗ ಮಾಡಿದಿರಿ? ಈ ಪರಿಯಿಂದ ಯಾಕ ಗಂಡಸಾಗಬೇಕು? ತಗೊಳ್ರಿ ಇವು ಬಳಿ ಇಟ್ಟುಕೊಂಡು ಸೀರಿ ಉಟ್ಟುಕೊಂಡು ಜೋಗತಿ ಆಗಿ ಕೊಡಾ ಹೊತ್ತುಕೊಂಡು ತಿರುಗಾಡ್ರಿ" ಎಂದು ಶಾಂತಿ ಸಿಟ್ಟಿನ ಭರದಲ್ಲಿ ತನ್ನ ಕೈಯೊಳಗಿನ ಎರಡು ಬಳಿಗಳನ್ನು ತಗೆದು ಮೋಹನನ ಮುಖದ ಮೇಲೆ ಎಸೆದಳು.

ಮೋಹನನಿಗೆ ಬುದ್ಧಿ ಭ್ರಮೆಯಾಯಿತು. ಹಾಸಿಗೆ ಬಿಟ್ಟು ಮೇಲೇಳುವ ಸ್ಥಿತಿಯಲ್ಲಿ ಇಲ್ಲದಿದ್ದರೂ ಹಾಸಿಗೆಯಿಂದ ಜಿಗಿದೆದ್ದನು- ಎಂದೂ ಇಲ್ಲದ ಒಂದು ಭಯಂಕರ ಶಕ್ತಿಯು ಅವನ ನಾಡಿನಾಡಿಗಳಲ್ಲಿ ಹರಿಯ ಹತ್ತಿತು. ಉರಿಯುವ ಕೆಂಗಣ್ಣಿನಿಂದ ಸುತ್ತೆಲ್ಲ ನೋಡಿದನು. ಅಲ್ಲಿಯೇ ತೆರೆದ ಕಪಾಟಿನಲ್ಲಿಯ ಒಂದು ಚೂರಿಯು ಅವನ ಕಣ್ಣಿಗೆ ಬಿದ್ದಿತು. ಅದನ್ನು ರಭಸದಿಂದ ಎಳೆದುಕೊಂಡು ಮುಷ್ಟಿಯಲ್ಲಿ ಬಿಗಿಯಾಗಿ ಹಿಡಿದುಕೊಂಡನು. ಒಂದೇ ಜಿಗಿತದಿಂದ ತನ್ನ ಹೆಂಡತಿಯು ಕಡೆಗೆ ಜಿಗಿದನು.

ಶಾಂತಿಯು ಹೆದರಿ, ಚೀರುತ್ತಾ ಜೀವದಾಶೆಗಾಗಿ ಅಡಿಗೆಯ ಮನೆಯೊಳಗೆ ಓಡಿದಳು. ಮೋಹನನೂ ಬೆನ್ನು ಹತ್ತಿದನು. ಒಂದೇ ಹಿಡಿತದಲ್ಲಿ ಅವಳನ್ನೆಳೆದು ನೆಲಕ್ಕೆ ಕೆಡವಿದನು. ಚೂರಿಯು ಎದೆಯನ್ನು ಸೇರಿತು. ರಕ್ತವು ಕಾರಂಜಿಯಂತೆ ಪುಟಿಯಹತ್ತಿತು.

ರಕ್ತವನ್ನು ಕಂಡ ಮೇಲಂತೂ ಮೋಹನಿಗೆ ಮತ್ತಿಷ್ಟು ಭ್ರಮೆಯಾಯಿತು. ಒಳ್ಳೇ ಜೋರಾಗಿ ನಗ ಹತ್ತಿದನು. ಶಾಂತಿಯ ಎದೆಯಿಂದ ಪುಟಿಯುತ್ತಿರುವ ರಕ್ತವನ್ನು ತನ್ನ ಹಣೆಗೆ ಹಚ್ಚಿಕೊಂಡನು. ನಗು ಮತ್ತಿಷ್ಟು ಜೋರಾಯಿತು. ಅವಳನ್ನು ಅಲ್ಲಿಯೇ ಬಿಟ್ಟು ಕೊಟ್ಟು–"ನಾನು ಹೇಡಿ-ಹೆಂಗಸು" ಎಂದು ಚೀರುತ್ತಾ, ಕೈಯಲ್ಲಿ ಚೂರಿಯನ್ನು ಹಿಡಿದುಕೊಂಡೇ ಮನೆಯಿಂದ ಹೊರಗೆ ಬಂದನು. ಅವನ ತಾಯಿಯು ಅವನಿಗೆ ಬಾಗಿಲುದದಲ್ಲಿಯೇ ಭೆಟ್ಟಿಯಾದಳು. ಇವನ ರೌದ್ರಾವತಾರವನ್ನು ಕಂಡು ಮೂಕ

ವಿಸ್ಮಿತಳಾಗಿ ನಿಂತುಕೊಂಡಳು. ಮೋಹನನು ಹುಚ್ಚನಗೆ ನಗುತ್ತಾ—"ನಾನು ಹೇಡಿ-ಹೆಂಗಸು" ಎಂದು ಚೀರುತ್ತಾ ಅವಳೆಡೆಗೆ ಧಾವಿಸಿ ಅವಳೆದೆಯಲ್ಲಿ ಚೂರಿಯನ್ನು ಚುಚ್ಚಿದನು. ಮತ್ತೆ ತನ್ನ ಮೈಮೇಲೆಲ್ಲ ರಕ್ತವನ್ನು ಕೆಡವಿಕೊಂಡನು.

ಹಾಗೆಯೇ ರಸ್ತೆಗೆ ಧಾವಿಸಿದನು. ಎದುರಿನಲ್ಲಿಯೇ ಒಬ್ಬ ಸ್ತ್ರೀಯು ಒಂದು ಕೂಸನ್ನು ಬಗಲಲ್ಲಿ ಎತ್ತಿಕೊಂಡು ಬರಹತ್ತಿದ್ದಳು. ಇವನನ್ನು ಕಂಡೊಡನೆಯೇ ಹೆದರಿ ಚೀರುತ್ತಾ ತಿರುಗಿ ಓಡ ಹತ್ತಿದಳು. ಇವನೂ ಅವಳ ಬೆನ್ನು ಹತ್ತಿದನು. ಅವಳು ಎಡವಿ ನೆಲಕ್ಕೆ ಬಿದ್ದಳು. ಅವಳ ಬೆನ್ನಲ್ಲಿ ಚೂರಿಯು ಹೋಯಿತು. ಕೂಸಿನ ರುಂಡವು ಮುಂಡದಿಂದ ಬೇರೆಯಾಗಿ ಬಿದ್ದಿತು.

"ನಾನು ಹೇಡಿ-ಹೆಂಗಸು" ಎಂದು ಚೀರುತ್ತಾ ಮೋಹನನು ಮಗ್ಗುಲಿನಲ್ಲಿಯೇ ಇದ್ದ ಒಂದು ಮನೆಯನ್ನು ಪ್ರವೇಶಿಸಿದನು. ಅಲ್ಲಿ ವಾಸಿಸುತ್ತಿದ್ದ ಗಂಡ ಹೆಂಡರಿಬ್ಬರು ತಮ್ಮ ಮಗನೊಂದಿಗೆ ಚಿನ್ನಾಟ ಮಾಡುತ್ತಾ ಕುಳಿತುಕೊಂಡಿದ್ದರು. ಅವರು ಇವನು ಏನು ಮಾಡುತ್ತಾನೆಂಬುದನ್ನು ವಿಚಾರಿಸುವದಕ್ಕಿಂತ ಮೊದಲೇ ಆ ಪುರುಷನ ಎದೆಯಲ್ಲಿ ಚೂರಿ ಹೋಯಿತು. ಆ ಹೆಂಗಳೆಯು ಮೂರ್ಛೆ ಹೊಂದಿದಳು. ಅವಳ ಎದೆಯಲ್ಲಿಯೂ ಚೂರಿ ನಟ್ಟಿತು. ಕೂಸಂತೂ ಚೂರಿಯನ್ನು ಹೊಟ್ಟೆಯಲ್ಲಿ ಸಿಕ್ಕಿಸಿಕೊಂಡು ಕುಂಬಾರನ ತಿಗರಿಯಂತೆ ತಿರುಗಹತ್ತಿತು.

ಇಷ್ಟೊತ್ತಿಗಾಗಲೇ ಊರಲ್ಲೆಲ್ಲ ಹಾಹಾಕಾರವೆದ್ದಿತು. ಮೋಹನನನ್ನು ಹೊಡೆಯುವದಕ್ಕಾಗಿ ಎಲ್ಲರೂ ಬಡಿಗೆ, ಕುಡಗೋಲು, ಕೊಡಲಿಗಳನ್ನು ತೆಗೆದುಕೊಂಡು ಧಾವಿಸಿ ಬಂದರು. ಊರ ಗೌಡರೂ ತಮ್ಮ ಎರಡು ಬಾರಿನ ಬಂದೂಕನ್ನು ಸಜ್ಜುಗೊಳಿಸಿಕೊಂಡು ಓಡುತ್ತಾ ಬಂದರು. ತನ್ನೆದುರಿಗೆ ನಿಂತ ಈ ಜನಸಮೂಹವನ್ನು ಕಂಡು ಮೋಹನನು ಮತ್ತಿಷ್ಟು ನಗಹತ್ತಿದನು.

"ನಾನು ಹೇಡಿ-ಹೆಂಗಸು" ಎಂದು ಚೀರುತ್ತಾ ಚೂರಿ ಹಿಡಿದುಕೊಂಡು ಮುನ್ನುಗ್ಗಿ ಅವರಮೇಲೆ ಬೀಳಲು ಯತ್ನಿಸಿದನು. ಗೌಡರು ಮೋಹನನ ಎದೆಗೇ ಗುರಿಯಿಟ್ಟು ತಮ್ಮ ಬಂದೂಕನ್ನು ಹಾರಿಸಿದರು. "ಢಂ! ಢಂ!!" ಎರಡು ಗುಂಡುಗಳು! ನೇರವಾಗಿ ಎದೆಯನ್ನೇ ಸೇರಿದವು. "ನಾನು ಹೇಡಿ-ಹೆಂಗಸು" ಎನ್ನುತ್ತಾ ಮೋಹನನು ನೆಲಕ್ಕೆ ಬಿದ್ದನು.

— ಹೂಬಳ್ಳಿ ಹೂಗಾರ.

*